ಮನೋಹರ ಗ್ರಂಥಮಾಲೆಯ ೧೩೬ನೆಯ ಕುಸುಮ

# ಕೆಂಪು ಗುಲಾಬಿ

(ಎಂಟು ಸಣ್ಣ ಕತೆಗಳ ಸಂಗ್ರಹ)



ಬರೆದವರು :

ಶ್ರೀಮತಿ ಎಂ. ಸೀತಾರತ್ನ



ಜೂನ್ ೧೯೫೪

ಬೆಲೆ ೧-೮-೦

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

.ಶಃ ೨

# ಓದುವ ಮೊದಲು

ಇದು ನನ್ನ ಮೊದಲ ಗ್ರಂಥ ಗ್ರಂಥಕ್ಕೆ ಮುನ್ನುಡಿ, ಅಂಗಣದಲ್ಲಿಯ ರಂಗವಲ್ಲಿಯಂತೆ

ಅನುದಿನವೂ ನಮ್ಮ ನೆರೆಹೊರೆಯುವರಲ್ಲೂ ನಿಜ ಜೀವನದಲ್ಲೂ ಕಂಡು, ಅನುಭವಿಸಿದ ಸನ್ನಿವೇಶಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು ಬರೆದುದರಿಂದ ಈ ಕಥೆಗಳಲ್ಲಿಯ ಪಾತ್ರಗಳು ಸಹ, ಜೀವನದ ಸಾಮೀಪ್ಯವನ್ನು ಹೆಚ್ಚಾಗಿ ಪಡೆದಿರಬೇಕೆಂದು,-- ಪಡೆದಿರದಿದ್ದರೆ ಪಡೆಯಬೇಕೆಂದು-- ನನ್ನ ಭಾವನೆಯಿದೆ, ಅಪೇಕ್ಷೆಯೂ ಇದೆ ಒಂದು ವೇಳೆ ಆ ಪಾತ್ರಗಳಿನ್ನೂ ಜೀವನದಿಂದ ದೂರ ನಿಂತಿದ್ದರೆ, ಈ ಕೈಗೆ ಅವನ್ನು ಜೀವನದ ಸಮೀಪಕ್ಕೆ ಕರೆತರುವ ಶಕ್ತಿ ಸಾಲದು ಎಂದೇ ತಿಳಿಯಬೇಕು.

ಬಾಳಗೆಳತಿಯೊಬ್ಬಳನ್ನು ತನ್ನ ಬಾಲ್ಯದಲ್ಲಿಯೇ ಆರಿಸಿಟ್ಟುಕೊಂಡು ತನಗವಳ ಸಹವಾಸಸಾಂಗತ್ಯಗಳು ದೊರೆಯದಿದ್ದರೂ ತಮ್ಮ ಆತ್ಮಮಿಲನದಲ್ಲೇ ಸಂತೃಪ್ತನಾಗಿ ಅವಳನ್ನು ಪ್ರೀತಿಸುವುದೇ ತನ್ನ ಜೀವನದ ದಾರಿಯೆಂದು ನಿಷ್ಕುರವಾದ ಏಕಾಂತ ಜೀವನವನ್ನಪ್ಪಿದ 'ಕಂಪು ಗುಲಾಬಿ'ಯ ವಾಸುವಿನಂತಹ ವ್ಯಕ್ತಿ ಜೀವನದಲ್ಲಿ ಅಪರೂಪವಾದರೂ, ಇಲ್ಲದೆ ಇಲ್ಲ

ಪದ್ಮಳೊಡನೆಯ ಸಮರಸದಾಂಪತ್ಯದಲ್ಲಿ ಜೀವನದ ಸವಿಯನ್ನು ಸಂಪೂರ್ಣವಾಗಿ ಅನುಭವಿಸಿ, ವಿಧಿಪ್ರೇರೇಪಣೆಯಲ್ಲಿ ಅವಳನ್ನು ಕಳದುಕೊಂಡು, ಸಾವಿತ್ರಿಯಂತಹ ಅರಸಿಕ, ಅವಿದ್ಯಾವಂತ ಹೆಂಡತಿಯೊಡನೆ ನಿರ್ಜೀವ ಸಪ್ಪೆ ಬಾಳನ್ನು ಸಾಗಿಸಬೇಕಾಗಿ ಬಂದ 'ಬೇವು-ಬೆಲ್ಲ'ದಲ್ಲಿಯ ಶ್ರೀನಿವಾಸನಂತಹ ವ್ಯಕ್ತಿ ಕಾಣಸಿಗುವುದು ದುರ್ಲಭವಲ್ಲ.

ಶಂಕರನ ತಂದೆಯನ್ನು ತನ್ನ ಜೀವಾದ್ಯಂತವೂ ಪ್ರೀತಿಸಿ, ತನ್ನಂತಹ ಹೆಣ್ಣೊಬ್ಬಳ ಬಾಳಿನಲ್ಲಿ ಬಿರುಗಾಳಿಯನ್ನಬ್ಬಿಸಲೊಪ್ಪದೆ, ತನ್ನ ಕಡೆಗಾಲದಲ್ಲೂ ದೂರವಿದ್ದೇ, ಶಂಕರನಲ್ಲಿಯೇ ಅವನ ತಂದೆಯ ಪ್ರತಿರೂಪವನ್ನು ಕಂಡು ಅಷ್ಟರಲ್ಲೇ ತೃಪ್ತಿಹೊಂದಿ ಮರೆಯಾದ 'ಆಕೆ'ಯಂತಹ ಹೆಣ್ಣುಗಳ ಅಜ್ಞಾತ ಜೀವನವನ್ನು ಬಹುಶಃ ಎಲ್ಲರೂ ಕಾಣಲಾರರು. ಮಾನವೀ

ಯುತೆಯನ್ನು ಕಾಣಲು ಸೌಹಾರ್ದ ಸಹಾನುಭೂತಿಗಳ ಕಣ್ಣುಗಳು ಬೇಕು

ಮದುವೆಯಾಗಿ, ತನ್ನ ಗಂಡನನ್ನೇ ಹೆಚ್ಚಾಗಿ ಪ್ರೀತಿಸುವ ಪ್ರತಿ ಹೆಣ್ಣಿಗೂ 'ತೌರಿನಲ್ಲಿ ಒಂದು ವಾರ' 'ದಿನಚರಿ' ಮತ್ತು 'ಅಂತಸ್ತಿನ ಅಂತರಂಗ' ಇವುಗಳಲ್ಲಿಯ ಸೀತೆಯ ಅನುಭವಗಳು ಹೊಸತಾಗಿರಲಾರವು

ನೊಂದ ಹೃದಯಕ್ಕೆ ಓ ಕೊಡಬೇಕಾದರೆ ನೊಂದ ಹೃದಯವೇ ಆಗಬೇಕು ಜೀವನೋಪಾಯಕ್ಕಾಗಿ ತಪ್ಪು ಹೆಜ್ಜೆಯನ್ನು ಹಾಕಿದ ಶ್ಯಾಮಲಾಳು, ಮೂರ್ತಿಯ ಸುಹೃದಯದಿಂದ ಬಂದ ಸಹಾನುಭೂತಿಯಿಂದ ಸ್ವಾನುಭೂತಿಯ ಬೆಳಕನ್ನು ಕಂಡು ಹೊಸ ಜೀವನನನ್ನಪ್ಪುತ್ತಾಳೆ ಮಾನವತ್ವ ಮತ್ತು ಸಹಾನುಭೂತಿ ಪ್ರತಿ ವ್ಯಕ್ತಿಯಲ್ಲೂ ಇದ್ದುದೇ ಆದರೆ, ಜೀವನದಲ್ಲಿಯ ಅನೇಕ ದುರಂತ ಘಟನೆಗಳನ್ನು ತಪ್ಪಿಸಬಹುದೆಂದು ನಿರೂಪಿಸುವುದೇ 'ಬಾಳ್ಗತ್ತಲಿ'ನ ಉದ್ದೇಶ

ಬೆಳೆಯುವ ಎಳೆಯ ಕರುಳಿಗೆ ಅಷ್ಟೈಶ್ವರ್ಯಗಳಿಗೂ ಹಿರಿದಾದುದು ತಾಯಿಯ ಒಡಲು ಎಂಬುದೇ 'ಅಮ್ಮಾ' ಎಂಬುದರಲ್ಲಿಯ ಸರಿ

ತೀರ ಸಣ್ಣ ವಯಸ್ಸಿನಿಂದಲೂ ಓದುವುದರಲ್ಲೇ ಹೆಚ್ಚು ಆಸಕ್ತಿಯನ್ನು ಹುಟ್ಟಿಸಿ, ಪುಸ್ತಕಗಳನ್ನು ಓದಿ, ಆ ತನ್ಮಯತೆಯಲ್ಲಿ ಅನುಭವಿಸಬಹುದಾದ ಸವಿಯನ್ನು ತೋರಿಸಿದ ಪೂಜ್ಯರಾದ ನನ್ನ ತಂದೆಯವರಿಗೆ ನಾನು ಚಿರಋಣಿಯಾಗಿದ್ದೇನೆ

'ತೌರಿನಲ್ಲಿ ಒಂದು ವಾರ' 'ಅಮ್ಮಾ' ಎಂಬ ಈ ಎರಡು ಕತೆಗಳಿಗೆ ಬೆಳಕು ಕೊಟ್ಟ 'ಸೋದರಿ'ಯ ಸಂಪಾದಕಿಯರಿಗೆ ನನ್ನ ಕೃತಜ್ಞತೆಗಳು

ನನ್ನ ಈ ಕತೆಗಳ ಸಂಕಲನವನ್ನು ತಮ್ಮ ಗ್ರಂಥಮಾಲೆಯಲ್ಲಿಯ ಕುಸುಮವೊಂದನ್ನಾಗಿ ಆರಿಸಿ ಪ್ರಕಟಿಸಿದ ಶ್ರೀ ಜಿ ಬಿ ಜೋಶಿಯವರಿಗೆ ನನ್ನ ಅನೇಕ ಕೃತಜ್ಞತಾಪೂರ್ವಕ ವಂದನೆಗಳು

ಕಾವಲಿ — ಎಂ ಸೀತಾರತ್ನ

೧೫-೧೨-೫೪

# ನಮ್ಮ ಮಾತು

'ಕೆಂಪು ಗುಲಾಬಿ' ಗ್ರಂಥಮಾಲೆಯ ಇಪ್ಪತ್ತೊಂದನೆಯ ವರ್ಷದ ಕೊನೆಯ ಕುಸುಮ ಗ್ರಾಹಕರಿಗೆ ಈ ಮೊದಲು ತಿಳಿಸಿದ ಪ್ರಕಾರ 'ಸರೂ' (ಗೃಹದೇವತೆ) ಎಂಬ ಕಾದಂಬರಿಯಿಂದ ಈ ವರ್ಷವು ಕೊನೆಗೊಳ್ಳಬೇಕಾಗಿತ್ತು. ಆದರೆ 'ಸರೂ' ೪೦೦ ಪುಟದ ವರೆಗೆ ಅಚ್ಚಿನಲ್ಲಿ ಬೆಳೆದಿದ್ದರಿಂದ ಅನಿವಾರ್ಯವಾಗಿ ಅದರ ಬದಲು ಈ 'ಕೆಂಪು ಗುಲಾಬಿ' ಯನ್ನೇ ಕೊಡಬೇಕಾಗಿ ಬಂತು ಆ ಗೃಹದೇವತೆ'ಯನ್ನು ಮುಂದಿನ ವರ್ಷದ ಗ್ರಂಥಗಳಲ್ಲಿ ಪ್ರಕಟಿಸಿ ಗ್ರಾಹಕರಿಗೆ ಸಲ್ಲಿಸಲಾಗುವುದು. ಈ ಅನಿರೀಕ್ಷಿತ ಅದಲು-ಬದಲನ್ನು ಅಭಿಮಾನಿಗಳಾದ ನಮ್ಮ ಗ್ರಾಹಕರು ಮನ್ನಿಸುವರೆಂದು ನಂಬಿದ್ದೇನೆ.

ಈ ವರ್ಷದಲ್ಲಿ ಪ್ರಕಟವಾದ ಗ್ರಂಥಗಳಿಂದ — ೧) 'ಮಾಲಾ ಮತ್ತು ಇತರ ಕತೆಗಳು' ಪುಟ ೨೧೬, ೨) ಗೃಹದಾರಣ್ಯಕ' ಪುಟ ೧೫೦ ೩) 'ಪತಿತೋದ್ಧಾರ' ಪುಟ ೧೩೫. ೪) 'ಶಾಂತಲಾ' ಪುಟ ೪೦೯, ೫) 'ಕೆಂಪು ಗುಲಾಬಿ' ಪುಟ ೧೨೮, ಹೀಗೆ—ಒಟ್ಟು ೧೦೩೮ ಪುಟಗಳನ್ನು ನಮ್ಮ ಚಂದಾದಾರರಿಗ ಸಲ್ಲಿಸಿದಂತಾಯಿತು. ಈ ಐದು ಗ್ರಂಥಗಳಲ್ಲಿ ಎರಡು ಸಣ್ಣ ಕತೆಗಳ ಸಂಗ್ರಹಗಳು, ಒಂದು ಸಾಮಾಜಿಕ ಕಾದಂಬರಿ, ಒಂದು ಐತಿಹಾಸಿಕ ಕಾದಂಬರಿ, ಒಂದು ಸಾಮಾಜಿಕ ನಾಟಕ ಹೀಗೆ ಸಾಹಿತ್ಯದ ವಿವಿಧ ಮುಖಗಳನ್ನೂ ಕಾಣಬಹುದು ಶ್ರೀ. ನಾ ಕಸ್ತೂರಿ ಯವರೊಬ್ಬರನ್ನು ಬಿಟ್ಟರೆ ಉಳಿದ ನಾಲ್ಕೂ ಜನ ಲೇಖಕರು ಗ್ರಂಥ ಮಾಲೆಯ ಓದುಗರಿಗೆ ಇದೇ ಮೊದಲ ಸಲ ಪರಿಚಯವಾಗುತ್ತಿರು ವುದು ಅದರಲ್ಲಿ ಒಬ್ಬರು 'ರೂಪದರ್ಶಿ' ಬರೆದು ಆಗಲೇ ಹೆಸರು ಗಳಿಸಿದವರು; ಇನ್ನೊಬ್ಬರು 'ಉದಯವಾಗಲಿ' ಎಂಬ ನಾಡಗೀತೆಯನ್ನು ಬರೆದು ಕನ್ನಡಿಗರೆಲ್ಲರ ನಾಲಗೆಯ ಮೇಲೂ ಇದ್ದವರು. ಉಳಿದಿಬ್ಬರು ಹೆಣ್ಣು ಮಕ್ಕಳು. ಅವರ ಮೊದಲ ಕೃತಿ ಇವು. ಆದರೂ ಗುಣ ಮುಗ್ಧರಾದ ರಸಿಕ ವಾಚಕರನ್ನು ಅವು ಮೆಚ್ಚಿಸದಿರಲಾರವು. ಗ್ರಂಥ ಮಾಲೆಯ ಮೇಲೆ ಅಭಿಮಾನವಿಟ್ಟು ತಮ್ಮ ಗ್ರಂಥಗಳನ್ನು ಕೊಟ್ಟ ಇವರಿಗೆ ನನ್ನ ಕೃತಜ್ಞತೆಯ ವಂದನೆಗಳು.

— **ಸಂಪಾದಕ**

## ಮುಂದಿನ ಗ್ರಂಥ

ಗ್ರಂಥಮಾಲೆಯ ೧೨೭ನೆಯ ಕುಸುಮ

ಹೊಸ ವರ್ಷದ ಮೊದಲನೆಯದು

# ಯಾತ್ರಿಕ

(ಆತ್ಮಜಿಜ್ಞಾಸಿಯ ವಿಚಾರಪ್ರಣಾಲಿ)

ಬರೆದವರು :

**ಶ್ರೀ. ರಂಗನಾಥ ದಿವಾಕರ**

# ಅರ್ಪಣ

ಎಂದಿಗೂ ಕೈಬಿಡದೆ

ಸುಗಮ ಮಾರ್ಗದಲ್ಲೇ

ಒಯ್ಯುತ್ತಿರುವ

ನನ್ನ ಅಂತರಾಳದ ಮಹಾಶಕ್ತಿ

'ಸ್ವಾಮಿ'ಗೆ

— ಸೀತಾರತ್ನ

# ಪ ರಿ ವಿ ಡಿ



## ಕೆಂಪು ಗುಲಾಬಿ ‡ ‡ ‡ ‡

೧

ವಾಣಿಯ ಮದುವೆಯಾಗಿ, ಇನ್ನೂ ಒಂದು ವರುಷ ಸಹ ಕಳೆದಿಲ್ಲ. ಶ್ರೀಧರನೊಡನೆ ವಾಣಿಯ ಮದುವೆ ನಿಶ್ಚಯ, ಅವಳ ಎಳೆತನದಲ್ಲೇ ಆಗಿತ್ತು. ವಾಣಿ ಸಂಜೀವರಾಯರ ಏಕಮಾತ್ರ ಸಂತಾನ. ಎಳೆ ಕೂಸಿನಲ್ಲೇ ತಾಯಿಯನ್ನು ಕಳೆದುಕೊಂಡ ವಾಣಿಯನ್ನು ಅವಳ ತಂದೆ ಅತಿ ಪ್ರೀತಿಯಿಂದ ಬೆಳೆಸಿದ್ದರು ವರ್ಣಿಸುವ ಸೌಂದರ್ಯವಿಲ್ಲದಿದ್ದರೂ, ಆಕರ್ಷಿಸುವ ಅದೊಂದು ಸೊಬಗು ಅವಳದಾಗಿತ್ತು. ಧನಿಕ, ಆಧುನಿಕ ವಾತಾವರಣದಲ್ಲಿ ಬೆಳೆದ ಅವಳು, ವಿದ್ಯಾವತಿಯೂ ಆಗಿದ್ದಳು ಪುಸ್ತಕಗಳೆಂದರೆ ಅವಳಿಗೆ ಹುಚ್ಚು ಗಾನ, ಕಾವ್ಯ ಇವುಗಳಲ್ಲಿ ತೀರದ ಮಮತೆ. ತಾನು ಓದುವ ಪುಸ್ತಕಗಳ ಪಾತ್ರಗಳಲ್ಲಿ, ತಾನೂ ಜೀವಿಸಿ, ತನ್ಮಯತೆಯನ್ನು ಅನುಭವಿಸುತ್ತಿದ್ದಳು. ಹೆಣ್ಣಿನ ಬಾಳು, ಹೂವಿನಂತೆಂದೆಣಿಸಿ, ತಾನೂ ಹೂವಿನಂತೆ, ತನ್ನ ಸುತ್ತುಮುತ್ತಲಿನ ತನ್ನವರಿಗೆ, ಆದಷ್ಟು ಸುಖ ಸಂತೋಷಗಳನ್ನು ಕೊಡಬೇಕೆಂಬುದೇ ಅವಳ ಧ್ಯೇಯವಾಗಿತ್ತು ಅಂತೇ ತಂದೆಯ ಮಾತಿಗೆ, ಅವರಿಗೆ ಅವರ ಮನಸ್ಸಿಗೆ ವಿರುದ್ಧವಾಗಿ ಎಂದೂ ಅವಳು ಉತ್ತರ ಹೇಳಿರಲಿಲ್ಲ

ಶ್ರೀಧರ ಸಂಜೀವರಾಯರ ಬಾಲ್ಯ ಸ್ನೇಹಿತ ಕೃಷ್ಣರಾಯರ ಮಗ ಬ್ಯಾರಿಸ್ಟರ್ ಪದವೀಧರ ವಾಣಿಯೊಡನೆ ತನ್ನ ಮದುವೆ ಅವನಿಗೆ ಹಿತವಾಗಿತ್ತು. ತನ್ನ ವಿದ್ಯೆಗೆ, ತನ್ನ ಅಂತಸ್ತಿಗೆ, ಸರಿತೂಗುವ ಅವಳ ವಿದ್ಯೆ ಮತ್ತು ಅಂತಸ್ತು ಅವನ ಮನಸ್ಸಿಗೆ ಸೇರಿತ್ತು. ತಾನು ಓಡಾಡುವ ಸಂಘಕ್ಕೆ ತನ್ನ ಪತ್ನಿ ಮೆರುಗೆಂದು ಅವನು ಒಲ್ಲ ಶ್ರೀಧರನದು ಕನಸು-ಸಾಮ್ರಾಜ್ಯದಲ್ಲಿ ತೇಲುವ ಸ್ವಭಾವವಲ್ಲ ಊಹಾಪೋಹಗಳಿಗೆ ಅವನಲ್ಲಿ ಅವಕಾಶವೇ ಇರಲಿಲ್ಲ ತನ್ನ ನಿತ್ಯ ಜೀವನದಲ್ಲಿ ಕುಂದುಕೊರತೆಗಳಿಲ್ಲದೆ, ನಯವಾಗಿ, ಎಲ್ಲರ ಮೆಚ್ಚುಗೆಯನ್ನೂ ಪಡೆದು ತನ್ನ ಸಂಸಾರವನ್ನು

ನಡೆಸಿಕೊಂಡು ಹೋಗುತ್ತಿದ್ದ ವಾಣಿಯ ಬಗ್ಗೆ ಅವನಿಗೆ ಆದರವಿದ್ದಿತಾಗಲಿ, ಅವಳ ಕವಿಹೃದಯವು ಬಯಸಿದ ಆದರ್ಶ ಪ್ರೀತಿಯಿರಲಿಲ್ಲ. ಹಣವನ್ನು ಗಳಿಸಿ, ಸಂಘದಲ್ಲಿ ಗಣ್ಯಸ್ಥಾನವನ್ನು ಪಡೆದು ಹಣಕಾಸಿನ ಹಿರಿಮೆಯ ಜೀವನಕ್ಕೆ ಹೆಚ್ಚು ಗಮನಕೊಡುತ್ತಿದ್ದ ಶ್ರೀಧರನಿಗೆ ವಾಣಿಯ ನಿಜಸ್ವಭಾವ ಅರಿಯಲು ಅವಕಾಶವಾಗಲಿಲ್ಲ ಅರಿಯಬೇಕೆಂಬ ಆತುರತೆಯೂ ಇರಲಿಲ್ಲ

ಮತ್ತೆ ವಾಣಿಯು ? ಅವಳು ತನ್ನ ಮತ್ತು ಶ್ರೀಧರನ ಮದುವೆಯ ಬಗ್ಗೆ ಹೆಚ್ಚು ವಿಚಾರಮಾಡಿಯೇ ಇರಲಿಲ್ಲ ಕುಟುಂಬ ಗೌರವಕ್ಕಾಗಿ, ಸಂಘದ ವ್ಯಕ್ತಿತ್ವಕ್ಕಾಗಿ, ಪ್ರತಿ ಹೆಣ್ಣಿಗೂ ಮದುವೆಯು ಅವಶ್ಯ ಅದು ಪ್ರಕೃತಿನಿಯಮವೂ ಹೌದು ಅದರಲ್ಲೂ ಹೆಣ್ಣಿಗದು, ಅವಳ ಮಾನ ಮರ್ಯಾದೆಗತ್ಯವಶ್ಯಕ. ತನಗಾಗಿ, ತನ್ನೆಲ್ಲ ಸೌಖ್ಯವನ್ನೂ ತ್ಯಾಗಮಾಡಿದ ತಂದೆಯ ಮನಸ್ಸನ್ನು ಮೆಚ್ಚಿಸಬೇಕಾದದ್ದು ತನ್ನ ಕರ್ತವ್ಯ ಅಂತೇ ಅವರೊಪ್ಪಿದ ಶ್ರೀಧರನೊಡನೆ ಅವಳ ಮದುವೆ ಆಗಲೇಬೇಕಿತ್ತು

ಹಾಗಾದರೆ ತಾನು ಶ್ರೀಧರನನ್ನು ತನ್ನ ಸ್ವಭಾವಕ್ಕನುಗುಣವಾಗಿ ಪ್ರೀತಿಸುತ್ತಿರುವಳೆ ? ಶ್ರೀಧರನು ಒಂದೆರಡು ನಿಮಿಷ ತನ್ನ ಬಳಿ ಇರದಿದ್ದರೆ ತನ್ನ ಮನಸ್ಸು ಕೌತುಕಗೊಳ್ಳುವುದೋ ? ಏನೊ ? ತನ್ನ ಮತ್ತು ಶ್ರೀಧರನ ದಾಂಪತ್ಯ ಆದರ್ಶದಾಂಪತ್ಯವಾಗಿ, ತನ್ನವರನ್ನೆಲ್ಲಾ ಸುಖಸಂತೋಷಗಳಿಂದ ನಲಿಸಬೇಕು .. ಸಾಧ್ಯವೆ ? ... ಅವರಿರ್ವರದೂ ಸಮರಸ ದಾಂಪತ್ಯವೆ ? ... ತನಗಿರುವ ಸಾಹಿತ್ಯ ಮತ್ತು ಕಾವ್ಯದಲ್ಲಿಯ ಅಭಿರುಚಿಯನ್ನು ತನಗಿಂತಲೂ ಹೆಚ್ಚಾಗಿ ಕಲಿತ ಶ್ರೀಧರನ ನೆರವಿನಲ್ಲಿ ಮತ್ತಿಷ್ಟು ಬೆಳಿಸಬೇಕೆಂದು ಆಶಿಸಿದ್ದಳಲ್ಲವೆ? ಎಷ್ಟು ಬಾರಿ ಶ್ರೀಧರನು ಬರುವ ವೇಳೆಗಾಗಲಿ, ಒಬ್ಬನೆ ಸುಮ್ಮನೆ ಕುಳಿತಿರುವ ಸಮಯದಲ್ಲಾಗಲಿ, ತನ್ನ ವೀಣೆಯನ್ನು ತೆಗೆದುಕೊಂಡು ಅದನ್ನು ನುಡಿಸಿ, ಅವನನ್ನು ನಲಿಸಬೇಕೆಂದು ಪ್ರಯತ್ನಿಸಿದ್ದಳು ? ಅದೇಕೋ ಶ್ರೀಧರನಿಗೆ, ಸಂಗೀತವೆಂದರೆ ಅಷ್ಟೇನೂ ಪ್ರೀತಿಯಿರಲಿಲ್ಲ. ಅವನ ಜೀವನದ ಗುರಿಯೇ ಬೇರೆಯಾಗಿತ್ತು. ಅಂತೆಯೇ ಅವನಿಗನುಸಾರವಾಗಿರಲು ಪ್ರಯತ್ನಿಸುತ್ತಿದ್ದಳು ಸಂಘ-ಸಮಾಜಗಳಲ್ಲಿ, "ಟೀಪಾರ್ಟಿ ಹರಟೆ"ಗಳಲ್ಲಿ ತಾನೂ ಅವನೊಂದಿಗೆ ಭಾಗವಹಿಸುತ್ತಿದ್ದಳಾಗಲಿ, ಅವರಲ್ಲಾವುದೊಂದರಲ್ಲೂ

ಅವಳಿಗೆ ಆಸಕ್ತಿಯಿರಲಿಲ್ಲ ತನಗಾಗಿ, ಅವಳು ಕಲ್ಪಿಸಿಕೊಂಡಿದ್ದ ಜೀವನವೇ ಬೇರೆಯಾಗಿತ್ತು; ತನ್ನ ಭಾಗ್ಯಕ್ಕೆ ವಿಧಿ ನಿಯಮಿಸಿದ ಜೀವನವೇ ಬೇರೆಯಾಗಿತ್ತು. ಅವಳು ತನ್ನ ಭಾವಗಳೊಂದನ್ನೂ ಯಾರಿಗೂ ತೋರ್ಪಡಿಸದೆ ತನ್ನ ನಿತ್ಯಕ್ರಮಗಳನ್ನು ನಡೆಸುತ್ತಿದ್ದಳು ಯಾವಾಗಲೂ ತಾನೊಬ್ಬಳೇ ಇರಲು ಬಯಸುತ್ತಿದ್ದಳು ಬೆಳುದಿಂಗಳ ಶೀತಲ ಕಿರಣದಲ್ಲಿ, ಸಂಜೆಗೆಂಪಿನಲ್ಲಿ, ಮುಂಜಾನೆಯ ಮೃದುಗಾಳಿಯಲ್ಲಿ, ಅದೊಂದು ಪ್ರತ್ಯೇಕತೆಯನ್ನು ಕಂಡು ಸೃಷ್ಟಿಸೌಂದರ್ಯದಲ್ಲಿ ತಲ್ಲೀನಳಾಗುತ್ತಿದ್ದಳು. ತನ್ನದೇ ಆದ ಒಂದು ಸುಂದರ ಜಗತ್ತನ್ನು ನಿರ್ಮಿಸಿಕೊಂಡು ತಾನೊಬ್ಬಳೇ ನಲಿಯುತ್ತಿದ್ದಳು ಒಮ್ಮೊಮ್ಮೆ ಆ ಪ್ರಕೃತಿಯ ನೊಬಗಿನಲ್ಲಿ ತನಗೆ ತಾನೇ ನಗುವಳು. ಒಮ್ಮೊಮ್ಮೆ ಅವಳರಿವಿಲ್ಲದೆಯೇ, ಕಣ್ತುಂಬ ನೀರು ತುಂಬುತ್ತಿತ್ತು ಅವಳ ಹೃದಯ ಅವಳಿಗೇ ಅರ್ಥವಾಗುತ್ತಿರಲಿಲ್ಲ ಅವಳ ನಿಜರೂಪವನ್ನೂ ಅವಳ ಜೀವನದ ತತ್ವವನ್ನೂ ಅರಿಯಲು ಯಾರೂ ಪ್ರಯತ್ನಿಸಿರಲಿಲ್ಲ. ಅಂತೇ ಅವಳಿಗ ಅಂತರ್ಯ ಪ್ರಿಯರಾರೂ ಇಲ್ಲವೆಂದೇ ಎನಿಸುತ್ತಿತ್ತು ಹಗಲು ರಾತ್ರಿ ತನ್ನ ಕಾರ್ಯಕ್ರಮದ ಪ್ರಕಾರ ತನ್ನ ಕಲಸ ಕಾರ್ಯಗಳಲ್ಲೆ ನಿಮಗ್ನನಾದ ಶ್ರೀಧರನಿಗ, ಆ ಹಗಲು-ರಾತ್ರಿಗಳಲ್ಲಿ, ವಾಣಿ ನೋಡುವ ಸೃಷ್ಟಿಸೌಂದರ್ಯವಾಗಲಿ, ಅವಳು ಅನುಭವಿಸುವ ಭಾವಗಳಾಗಲಿ, ಉತ್ಸಾಹವಾಗಲಿ, ಅವನಿಗರ್ಥವಾಗುತ್ತಿರಲಿಲ್ಲ. ಅಂತೇ ಅವರು ಬಾಹ್ಯಪ್ರಪಂಚದಲ್ಲೇ ವಿನಾ, ವಾಸ್ತವವಾಗಿ ಒಬ್ಬರಿಂದೊಬ್ಬರು ದೂರವೇ ಇರುತ್ತಿದ್ದರು. ವಾಣಿಗೆ ಅದರಿಂದ ಅವಳಿಗರ್ಥವಾಗದ, ಏನೋ ವೇದನೆ. ಶ್ರೀಧರನಿಗೆ ಅಂತಹ ಒಂದು ಮಧುರಬಾಂಧವ್ಯದ ರಸನಿಮಿಷ ಕಂಡುಹಿಡಿಯಲು ಅವಕಾಶವೇ ಇಲ್ಲ.

ಅಂತೇ ವಾಣಿಯ ಜೀವನ ನಿರುತ್ಸಾಹವಾಗೇ ನಡೆದು ಹೋಗುತ್ತಿತ್ತು ವಾಣಿ-ಶ್ರೀಧರರ ಮದುವೆಗೆ ಬರಲು ಅವಕಾಶವಿಲ್ಲದ ವಾಸು, ಶ್ರೀಧರನ ಒತ್ತಾಯದಿಂದ ಈ ದಿನ ಬರುವನು ವಾಸು, ಶ್ರೀಧರನಿಗೆ ಮೆಚ್ಚಿನ ಸ್ನೇಹಿತ. ಆದರೆ ಅವರ ಸ್ವಭಾವವು ಅತಿ ವಿರುದ್ಧ ವಾಸು ಅದೊಂದು ನಮೂನೆಯ ಮನುಷ್ಯ. ಯಾರಲ್ಲೂ ಹಚ್ಚಿಗ ಸೇರನು. ತನಗೆ ತಾನೇ ಸ್ವಪ್ನಯೋಗಿ ವಿಲಾಯತಿಯಲ್ಲಿ ಇದ್ದಾಗಲೂ ಹಾಗೇ ಇರುತ್ತಿದ್ದನು. ಗಂಟೆಗಳ ಹೊತ್ತು ಹುಡುಗರೆಲ್ಲ ಅಲ್ಲಿ ಇಲ್ಲಿನ ಸುದ್ದಿ

ಯೆಲ್ಲಾ ಮಾತಾಡುತ್ತಿದ್ದರೂ, ತಾನು ಮಾತ್ರ ಹಾಗೇ ಇರುತ್ತಿದ್ದನು. ಹೆಂಗಸರೆಂದರೆ ಮತ್ತಿಷ್ಟು ಗಂಭೀರ. ತನ್ನ ಅಂತರ್ಯವನ್ನು ಚರ್ಚಿಸಲು, ಯಾರೂ ಅರ್ಹರಲ್ಲವೆಂಬಂತೆ, ಯಾರಲ್ಲೂ ತನ್ನ ಸಮಾಚಾರವನ್ನು ಎಂದೂ ಹೇಳಿಕೊಳ್ಳುತ್ತಿರಲಿಲ್ಲ ಅಂತೇ ಅವನ ಭಾವನಾತರಂಗಗಳು, ಒಮ್ಮೊಮ್ಮೆ ಅವನ ಕಣ್ಣುಗಳಲ್ಲಿ ಹೊಳೆಯುತ್ತಿದ್ದವು ಎಂಮೂ, ಯಾವು ದಾದರೊಂದು ಪುಸ್ತಕದಲ್ಲಿ ಮಗ್ನನಾಗಿರುತ್ತಿದ್ದನು ಸಹಪಾಠಿಗಳೆಲ್ಲರೂ 'ಪಿಕ್‌ನಿಕ್' "ಎಕ್ಸ್‌ಕರ್‌ಶನ್" ಎಂದು ಹೊರಟರೂ ತಾನೊಬ್ಬನು ಮಾತ್ರ ಶಾಂತಿಯುತವಾದ ಜಾಗವನ್ನು ಹುಡುಕಿಕೊಂಡು ಹೋಗಿ ಒಬ್ಬನೇ ಕುಳಿತು ನಿಸರ್ಗಸೌಂದರ್ಯದಲ್ಲಿ ತನ್ಮಯನಾಗುತ್ತಿದ್ದನು ಆ ತನ್ಮಯತೆಯ ಸ್ಫೂರ್ತಿಯಲ್ಲಿ ಇತ್ತೀಚೆಗೆ ಕಾವ್ಯಗಳನ್ನು ಸಹ ಬರೆಯು ತ್ತಿದ್ದನು ಸ್ವಭಾವಗಳು ವಿರುದ್ಧವಿದ್ದರೂ, ಏಕದೇಶಿಯರೆಂದೊ ಏನೊ, ವಾಸು ಶ್ರೀಧರರ ಸ್ನೇಹ ವಿಲಾಯತಿಯಲ್ಲಿ ಪ್ರಾರಂಭವಾಗಿ, ಬೆಳೆದು ಕೊಂಡೇ ಬಂದಿತ್ತು ಮದುವೆಗೆ ಬರಬೇಕೆಂದು ಶ್ರೀಧರನು ಎಷ್ಟು ಒತ್ತಾಯ ಮಾಡಿದರೂ, ಅಸಂದರ್ಭಗಳಿಂದ ಬರಲಾಗುವುದಿಲ್ಲವೆಂದು ನಿಂತಿದ್ದನು. ಆದರಿಂದು ಬರಲೇಬೇಕಾಯಿತು, ಸ್ನೇಹಿತನಿಗೋಸ್ಕರ ಮಧ್ಯಾಹ್ನದ ರೈಲಿನಲ್ಲಿ ಬರುವ ವಾಸುವಿಗೋಸ್ಕರ, ಶ್ರೀಧರನ ಮನೆಯಲ್ಲಿ ಬೆಳಗಿನಿಂದ ಸಡಗರ. ವಾಣಿ ವಾಸುವಿಗೋಸ್ಕರ ಒಂದು ಕೋಣೆಯನ್ನು ಸಜ್ಜುಪಡಿಸಿದಳು. ಕಲಾಭಿಮಾನಿಯಾದ ಅವಳು, ಯಾವುದೊಂದೂ ಆಕರ್ಷಣೀಯವಾಗಿಯೇ ಮಾಡುತ್ತಿದ್ದಳು. ವಾಸುವಿಗಾಗಿ ಹೆಚ್ಚಿನ ಅಡಿಗೆ, ತಿಂಡಿ, ತೀರ್ಥದ ನಿಮಿತ್ತ ಅಡಿಗೆಮನೆಯಲ್ಲೇ ಕೆಲಸ ಮಾಡು ತ್ತಿದ್ದಳು ಅಷ್ಟರಲ್ಲೇ, ವಾಸುವನ್ನು ಕರೆತರಲು ಹೋದ ಶ್ರೀಧರ "ವಾಣಿ, ವಾಣಿ!" ಎಂದು ಬಂದೇ ಬಂದನು ವಾಸುವಿನೊಡನೆ. ವಾಣಿಗೆ ಉಡುಪು ಕೂಡ ಬದಲಾಯಿಸಲು ಸಮಯವಿರಲಿಲ್ಲ ಒಲೆಯ ಝಳದಿಂದ ಅವಳ ಮುಖದ ಮೇಲೆ ಬೆವರಿನ ಬಿಂದುಗಳು ಮೂಡಿ, ಅದರ ಶೋಭೆಯನ್ನು ಹೆಚ್ಚಿಸಿದವು. ನೊಕ್ಕಿನ ಅವಳ ಮುಂಗುರುಳು ಬೇಡವೆಂದರೂ ಹಣೆಯ ಮೇಲೇ ಬೀಳುತ್ತಿತ್ತು ಹಾಗೇ ಹೊರಗೆ ಬಂದಳು ವಾಣಿ. "ವಾಣಿ, ಇಲ್ಲಿ ನೋಡು, ವಾಸು ಬಂದಿದ್ದಾನೆ" ಎಂದು ಶ್ರೀಧರ ಪರಿಚಯ ಮಾಡಿಸಿದ. ವಾಣಿ ಕಣ್ಣೆತ್ತಿ ವಾಸುವನ್ನು

ನೋಡಿದಾಗ, ಚಲಿಸದೆ ಸ್ತಬ್ಧಳಾಗಿ ನಿಂತಳು ವಾಸುವು ಯಾವ ಭಾವವನ್ನೂ ವ್ಯಕ್ತಪಡಿಸದೆ ಹಾಗೇ ನಿಂತ ವಾಣಿಯು ಚೇತರಿಸಿಕೊಂಡವಳಂತೆ, "ನೀವು ರೋಜಾಪುರದಲ್ಲಿನ ವಾಸುವ ?" ಎಂದಳು ಸಿಥಾಸಿಸುತ್ತಾ, ನೆನಪು ಮಾಡಿಕೊಳ್ಳುತ್ತಾ

' ಹೋ, ಹಳೆಯ ಗೆಳೆಯರೂನ್ನು ! ವಾಣಿ, ನೀನು ನನಗೆ ಹೇಳೇ ಇರಲಿಲ್ಲವಲ್ಲ, ವಾಸುವಿನ ಪರಿಚಯ ಇದೆಯೆಂದು ? " ಎಂದ ಶ್ರೀಧರ

ವಾಣಿಗೆ ಏನು ಹೇಳಲೂ ತೋರಲಿಲ್ಲ ಅವಳು ಈ ಲೋಕವನ್ನೇ ಮರೆತಂತಿದ್ದಳು.

ಶ್ರೀಧರನ ಪ್ರಶ್ನೆಗೆ ವಾಸೂನೇ ಉತ್ತರ ಹೇಳಬೇಕಾಯಿತು. "ಅದು ತೀರ ೧೩-೧೪ ವರ್ಷಗಳ ಹಿಂದಿನ ಮಾತು ಶ್ರೀಮತಿ ಶ್ರೀಧರ ಆಗಿನ್ನೂ ಹತ್ತು ವರ್ಷದ ಹುಡುಗಿ ಸಣ್ಣ ಹುಡುಗನಾಗಿ ಜತೆಯಲ್ಲಿ ಆಡುತ್ತಿದ್ದವನು ಈಗ, ಇಷ್ಟು ಉದ್ದ, ಗಾತ್ರವಾಗಿ ಬೆಳದಿದ್ದೇನಲ್ಲವೆ ? ಅದು ಹೇಗಾದರೊ ಗುರ್ತಿಸಿದರೋ ಕಾಣೆ!" ಎಂದ ವಾಸು ತನ್ನ ಸೃಜವಾದ ಸಂಯಮದಿಂದಲೇ.

"ಎಂತಹ ಸುಂದರ ದಿನಗಳವು ? ಎಸ್ಲ್ಲಿ ಆಟವಾಡುತ್ತಿದ್ದೆವು ? ಬೆಟ್ಟ ಬಯಲುಗಳೆಲ್ಲಾ ನಮ್ಮ ಪಾಲೇ ಆಗುತ್ತಿದ್ದವಲ್ಲವೆ ? ನಮ್ಮ ತಂದೆಗೆ ಅಲ್ಲಿಂದ ವರ್ಗವಾದ ನಂತರ, ನಿಮ್ಮ ಸುದ್ದಿಯೇ ನಮಗೆ ತಿಳಿಯಲಿಲ್ಲ ವಿಲಾಯತಿಯಲ್ಲಿದ್ದಾಗ, 'ವಾಸು'ವೆಂಬ ಒಬ್ಬರೊಡನೆ, ಪರಿಚಯವಾಯಿತೆಂದು ಇವರು ಎಷ್ಟೋ ಬಾರಿ ಹೇಳುತ್ತಿದ್ದರಾಗಲಿ, ನೀವೇ ಇರಬಹುದೆಂದು ನನಗೆ ತೋರಲೇ ಇಲ್ಲ " ಎಂದಳು ವಾಣಿ

"ಹೌದು, ನೀವು ನನ್ನನ್ನು ಕಂಡಾಗ, ವಿಲಾಯತಿಯೇಕೆ, ತೀರ ಹೈಸ್ಕೂಲಿನ ವಿದ್ಯಾಭ್ಯಾಸವೂ ಸಹ ಪೂರ್ತಿ ಮಾಡುವಂತಿರಲಿಲ್ಲ ನೀವು ಊರು ಬಿಟ್ಟ ವರ್ಷವೇ ನನ್ನ ತಂದೆಯು ಸ್ವರ್ಗಸ್ಥರಾದರು ಇನ್ನು ದಿನದ ಊಟ ಕಳೆಯುವುದೇ ಕಷ್ಟವಾಗಿತ್ತು."

"ಪಾಪ ! ಸ್ವರ್ಣ ಎಲ್ಲಿದ್ದಾಳೆ ? " ಎಂದಳು ವಾಣಿ ಮರುಕದಿಂದ.

"ಸ್ವರ್ಣನ್ನ ಸೋದರತ್ತೆಯ ಬಳಿ ಬಿಟ್ಟು, ಭಿಕ್ಷಾನ್ನದಲ್ಲಿ ಹೀಗೇ ದೊಡ್ಡ ಮನುಷ್ಯರ ಧಾರಾಳತ್ವದಲ್ಲಿ ಬಿ. ಎ. ಮುಗಿಸಿದೆ ಎಲ್ಲಿಯ

ಪುಣ್ಯವೋ ಅಥವಾ ಅದೃಷ್ಟವೋ, ವಿಲಾಯತಿಗೆ ಕಳುಹಲು ಸ್ಕಾಲರ್ ಷಿಪ್ ಸಿಕ್ಕಿತು ಸೋಡಿ, ವಿಧಿ ಎಲ್ಲಿಂದ ಎಲ್ಲಿಗೆ ಸುತ್ತಾಡಿಸಿ ಕರೆದು ತಂದು ಬಿಟ್ಟಿತ್ತೊ!''

'ಸ್ವರ್ಣ ಹೇಗಿದ್ದಾಳೆ? ಮದುವೆಯಾಯಿತೆ?''

'ಹೌದಮ್ಮ, ಇಬ್ಬರು ಮಕ್ಕಳ ತಾಯಿ ಅವಳದು ಸುಖದಾಂಪತ್ಯ ಜೀವನ.'' ಎಂದ ವಾಸು

'ನಿಮಗೆ ?'' ಎಂದು ಕೇಳಲೇ ಬೇಡವೇ ಎಂದು ಹಿಂದೆಗೆಯುತ್ತಾ ಪ್ರಶ್ನಿಸಿದಳು ವಾಣಿ

''ಸರಿ, ಅವನು ಬಿಡು, ವಾಣಿ, ಎಲ್ಲಿಲ್ಲದ ವೇದಾಂತ, ಏನೋ ಆದರ್ಶ ಅವನೊಬ್ಬ ಆಜನ್ಮಸನ್ಯಾಸಿ ಮಾತಾಡುತ್ತಾ ಕಾಫಿ ತಿಂಡಿ ಮರೆತೇ ಹೋಯ್ತೇನೆ ವಾಣಿ? ವಾಸು ನಾಳೆ ಎಲ್ಲಾ ಇರುತ್ತಾನೆ...'' ಎಂದು ಅವರ ಸಂಭಾಷಣೆಗೆ ಶ್ರೀಧರನು ಅಡ್ಡ ಬಂದನು. ವಾಣಿ ಒಳಕ್ಕೆ ಹೋದಳು ಅವಳಿಗಲ್ಲೊ ಸ್ವಪ್ನದಲ್ಲಿ ತಾನು ಸಂಚರಿಸುವ ಹಾಗೆನಿಸಿತ್ತು.

ವಾಸುವನ್ನು ಅವಳು ಹಿಂದೆ ನೋಡಿದಾಗ, ೧೭-೧೩ ವರ್ಷದ ಹುಡುಗನು ಆಗ ನಂತಯೇ ಸುಂದರ ವಿಶ್ವಸನೀಯವಾದ ಅವನ ಮುಖ ಆಕರ್ಷಣೀಯವಾಗೇ ಇತ್ತು ಕಣ್ಣುಗಳಲ್ಲಿ ಮಾತ್ರ ಆಗಿನ ಚೇಷ್ಟೆ ಚಂಚಲತೆ ಇರಲಿಲ್ಲ. ವೇದನೆಯೊಂದಿಗ ಮಿಳಿತವಾದ ಸಹನೆಯ ಕಾಂತಿ ಚಿಕ್ಕತನದಲ್ಲಿ ತಾನೂ ವಾಸೂ ಎಡಬಿಡದ ಒಡನಾಡಿಗಳು. ತನ್ನನ್ನು ನೋಡಿದರೆ ಅವನಿಗೆ ಬಹಳ ಅಕ್ಕರೆ ತನಗೋಸ್ಕರ ಏನಾದರೂ ಮಾಡುತ್ತಿದ್ದ. ಶ್ರೀಧರನ ಹೆಂಡತಿ ತನ್ನ ಬಾಲ್ಯದ ಗೆಳತಿ ಎಂದು ಅವನಿಗೆ ತಿಳಿದಿದ್ದಿತು ಮತ್ತೇಕೆ ಮದುವೆಗ ಬರಲಿಲ್ಲ? ಅವನೇಕೆ ಇನ್ನೂ ಮದುವೆಯಾಗಿಲ್ಲ? ....ಏನೆಲ್ಲ ಹಿಂದಿನ ನೆನಪುಗಳು ತನ್ನನ್ನು ಮುತ್ತುತ್ತಿವೆ? ಅಡಿಗೆ ಕೆಲಸ ಮಾಡುತ್ತಿದ್ದರೂ, ವಾಣಿಯ ಚಿತ್ತವೆಲ್ಲೊ ಇತ್ತು.

ವಾಸು ತನ್ನ ಬಾಲ್ಯಸ್ನೇಹಿತ... ಎಷ್ಟು ವರ್ಷಗಳ ನಂತರ ಪುನಃ ಅವನ ದರ್ಶನ! ಎಷ್ಟು ಬಾರಿ ತಾನು ಅವನನ್ನು ನೆನೆಯುತ್ತಿದ್ದಳಾಗಲಿ, ಆದರಿಂ ದಿನ, ಅವನನ್ನು ನೋಡಿದ ನಂತರ, ತನಗೇನೋ ಒಂದು ಬಗೆಯಾಗಿದೆ!

ಏನೂ .......?

ತನಗೋಸ್ಕರ ಎಷ್ಟು ಬಗೆಯ ಆಟಗಳಾಡುತ್ತಿದ್ದ! ಎಷ್ಟು ಪದ್ಯಗಳನ್ನೆಲ್ಲಾ ಓದುತ್ತಿದ್ದ?

ಒಂದು ದಿನ, ಆಗ...ನಾವಿಬ್ಬರೂ ತೀರ ಸಣ್ಣವರಾಗಿದ್ದಾಗ ತಾನು ಶಾಲೆಗೆ ಹೋಗುತ್ತಾ, ದಾರಿಯಲ್ಲಿ, ಮ್ಯಾಜಿಸ್ಟ್ರೇಟರ ಮನೆಯಲ್ಲಿನ ಕೆಂಪು ಗುಲಾಬಿ ತನ್ನನ್ನು ಕರೆಯಿತು! ಅರೆತೆರೆದ ಆ ಹೂ ಎಷ್ಟು ಚನ್ನಾಗಿತ್ತು! ತನಗೆ ಆ ಹೂ ಬೇಕಾಯಿತು ದಿನವೂ ತನ್ನೊಟ್ಟಿಗೇ ಬರುತ್ತಿದ್ದ ವಾಸು ಮತ್ತು ಅವನ ತಂಗಿ ಸ್ವರ್ಣ, ಆ ದಿನ "ನೀನು ಹೋಗು, ನಾವಿನ್ನೂ ಊಟ ಮಾಡಿಲ್ಲ ಮಾಡಿ ಬರುತ್ತೇವೆ" ಎಂದಿದ್ದರು ಅಂತೇ ತಾನೊಬ್ಬಳೇ ಹೊರಟಿದ್ದಳು ಇಷ್ಟರಲ್ಲಿ ಈ ಕೆಂಪುಗುಲಾಬಿ ಬೇಕೆನಿಸಿತು ಸುತ್ತುಮುತ್ತು ನೋಡಿ ಹೇಗೋ, ಕಾಂಪೌಂಡ್ ಗೋಡೆಯನ್ನು ಹತ್ತಿದ್ದಳು.... ಕೆಂಪುಗುಲಾಬಿಗಾಗಿ! ಮೇಲಿನ ರೆಂಬೆಯಲ್ಲಿನ ಗುಲಾಬಿಯನ್ನು ಕುಯ್ಯಲು, ಬಾಗಿ ಹೂ ತೆಗೆಯುತ್ತಿರಲು, ಕೆನ್ನೆಗೆ ಗುಲಾಬಿ ಮುಳ್ಳೊಂದು ತಗುಲಿ, ಒಂದಿಷ್ಟು ರಕ್ತ ಬಂದಿತ್ತು ಅದನ್ನು ಒರೆಸಿ, ಕೆಳಗಿಳಿಯುವ ವೇಳೆಗೆ, ವಾಸು ಅಲ್ಲಿ ಬಂದು ನಿಂತಿದ್ದ

"ಇದೇನು ವಾಣಿ! ಕೆನ್ನೆಯೆಲ್ಲಾ ರಕ್ತ!" ಎಂದ ವಾಸು

"ಈ ಗುಲಾಬಿ ಬೇಕಿತ್ತು ವಾಸು ... .. ಅದಕ್ಕೆ!"

"ಅಯ್ಯೋ ಹುಡುಗಿ! ಪಾಪ, ಗೋಡೆಯ ಮೇಲೆ ಹತ್ತಿದ ಸರ್ಕಸು ನಾಲದೆ ಈ ಗಾಯ ಬೇರೆ! ಅಲ್ಲೇ ಇರು, ಧುಮುಕಬೇಡ, ಹಲ್ಲು ಮುರಿದೀತು! ಹಲ್ಲು-ಮುರುಕಿಯಾದರ ನೋಡು ಒಳ್ಳೇ ಗಂಡ ಬರುವುದಿಲ್ಲ!"

"ಹೋಗೋ ವಾಸು, . ಮನೆಯವರು ಯಾರಾದರೂ ಬಂದಾರು ...ನಿನಗ ತಮಾಷೆನಪ್ಪಾ! ಇಳಿಸುತ್ತೀಯೋ ಇಲ್ಲವೋ?"

"ಹೂಂ ನೋಡು ವಾಣಿ, ನಾನು ಬಾಗುತ್ತೇನೆ. ನನ್ನ ಬೆನ್ನ ಮೇಲೆ ಕಾಲಿರಿಸಿ, ಮೆಲ್ಲಗೆ ಇಳಿ" ...ತಾನು ಹಾಗೇ ಇಳಿದಿದ್ದಳು ಅವನ ಬಿಳಿ ಷರ್ಟಿನ ಮೇಲೆ, ತನ್ನ ಕಾಲಿನ ಗುರ್ತು ಬಿದ್ದಾಗ, ಅದನ್ನು ತಟ್ಟಿದ್ದಳು ಇಳಿದ ನಂತರ, ವಾಸು, ತನ್ನ ಷರ್ಟಿನ ಕೊನೆಯನ್ನು ತನ್ನ ಎಂಜಲಿನಲ್ಲಿ ಒದ್ದೆ ಮಾಡಿ, ಅವಳ ಕೆನ್ನೆಯ ಮೇಲಿದ್ದ ಒಂದಿಷ್ಟು ರಕ್ತದ ಕಲೆಯನ್ನು ಒರೆಸುತ್ತಾ "ಗಾಯ ಮಾಡಿಕೊಂಡಾದರೂ ಆ ಹೂ

ಬೇಕಿತ್ತೆ ನಿನಗೆ? ಇಲ್ಲದಿದ್ದರೇನು ನಡೆಯುತ್ತಿರಲಿಲ್ಲಿ? .... ಕಳ್ಳೀ...." ಎಂದ.

"ಹೋಗೊ ನಾನೇನು ಕಳ್ಳಿಯಲ್ಲ ನನಗೆ ಕೆಂಪು ಗುಲಾಬಿ ಎಷ್ಟು ಪ್ರೀತಿ ಎಂದು ಗೊತ್ತೇನು ನಿನಗೆ? ಇಷ್ಟವಾದ ವಸ್ತುವು ಬೇಕೆಂದಾಗ, ಯಾವ ನೋವೂ ತಿಳಿಯುವದಿಲ್ಲ ಅಲ್ಲವೇನೂ ವಾಸು?" ಎಂದಿದ್ದಳು

"ವಾಪ....ನಿನ್ನ ಕೆನ್ನೆ ಕೆಂಪು ಗುಲಾಬಿಗಿಂತ ಕೆಂಪಾಗಿದೆ ನನಗೇನೂ ಈ ಗುಲಾಬಿನೇ ಇಷ್ಟ" ಎಂದು ಮತ್ತೊಮ್ಮೆ ಅವಳ ಕೆನ್ನೆಯನ್ನು ಒರೆಸಿ ಅಲ್ಲಿ ಮುತ್ತಿಟ್ಟಿದ್ದನು. ಇಷ್ಟರಲ್ಲೇ ಶಾಲೆಯ ಬೆಲ್ ಕೇಳಿಸಿತೆಂದು ಇಬ್ಬರೂ ತಂತಮ್ಮ ಶಾಲೆಗೆ ಓಡಿದರು ಅಂದಿನಿಂದ ವಾಸು ತನ್ನನ್ನು ಕೆಂಪು ಗುಲಾಬಿಯೆಂದೇ ಕರೆದಿದ್ದ ...ಎಂತಹ ಮಧುರವಾದ, ನಿಷ್ಕಪಟವಾದ ಭಾಂದವ್ಯವದು? ವಾಸುವಿಗ, ಈಗ ಅದೆಲ್ಲಾ ನೆನಪಿದೆಯೋ? ಇಂದು ವಾಸುವಿನೊಂದಿಗೆ ತಾನೇಕೆ ಮುಂಚಿನಂತಿರಲಾರಳು? ವಾಸುವೂ ಏನೊ ಒಂದು ವಿಧವಾದ ಬಿಗಿಯಿಂದ, ಗಂಭೀರದಿಂದಲೇ ಇದ್ದಾನೆ. ಹಾಗೇಕೆ?

ಹೇಗೂ ತನ್ನ ಕೆಲಸಗಳನ್ನೆಲ್ಲಾ ಮುಗಿಸಿಕೊಂಡು ತನ್ನ ತೋಟದಲ್ಲಿ ತಾನೇ ಬೆಳೆಸಿದ ಕೆಂಪು ಗುಲಾಬಿ ಗಿಡಗಳ ಮಧ್ಯೆ ತನ್ನ ದಿನದ ಮಾಮೂಲಿನ ಜಾಗದಲ್ಲಿ ಬಂದು ಕೂತಳು ಬಿದಿಗೆಯ ಚಂದ್ರನು ಆಗಾಗಲೇ ಹೊರಗೆ ಬಂದಿದ್ದನು. ತೋಟದಲ್ಲಿನ ಹೂ-ಪರಿಮಳ ಗಾಳಿಯಲ್ಲಿ ಮಿಳಿತವಾಗಿತ್ತು. ವಾಣಿ ಚಂದ್ರನ ಕಾಂತಿಯನ್ನು ನೋಡುತ್ತ, ತನಗರಿಯದ ಯಾವುದೋ ಒಂದು ನೂತನ ಅನುಭವದಿಂದ, ಪರಧ್ಯಾನಳಾಗಿದ್ದಳು ಎಷ್ಟೋ ವರ್ಷಗಳ ನಂತರ, ವಾಸುವನ್ನು ಅನಿರೀಕ್ಷಿತವಾಗಿ ಸಂಧಿಸಿದ್ದು, ಆ ಭೇಟಿಯಲ್ಲಿ, ತನ್ನಲ್ಲಿ ಯಾವುದೊ ಒಂದು ಬಗೆಯ ಉಲ್ಲಾಸ, ಅವಳ ಮುಖಕ್ಕೆ ಅದೊಂದು ನೂತನ ಶೋಭೆಯನ್ನು ಕೊಟ್ಟಿತ್ತು. ತನ್ನರಿವಿಲ್ಲದೆಯೇ, ತನ್ನ ಮನಸ್ಸು, ವಾಸುವನ್ನು ನೆನೆಯುತ್ತಿದೆ. ಬಹುತಃ ವಾಸು ತನೊಟ್ಟಿಗೆ ಇದ್ದಿದ್ದರೆ ತನ್ನೊಂದಿಗೆ ಅವನೂ ಪ್ರಕೃತಿಶೋಭೆಯ ಆನಂದವನ್ನು ತನ್ನಂತೆಯೇ ಅನುಭವಿಸುತ್ತಿದ್ದನೇನೊ!

"ಏಕೆ ಒಬ್ಬರೇ ಕುಳಿತಿರುವಿರಿ ? ''

ವಾಣಿ ಬೆಚ್ಚಿಬಿದ್ದು ಹಿಂದಿರುಗಿ ನೋಡಿದಳು ತಾನು ನೋಡುವುದು ನಿಜವೆ? ಇಲ್ಲಿ ತಾನು ಹೆಚ್ಚಾಗಿ ನೆನೆಯುತ್ತಿದ್ದುದರಿಂದ ತನ್ನ ಕಣ್ಣುಗಳೇ ಮೋಸಪಡಿಸುತ್ತಿವೆಯೆ? ಅವಳ ಹಿಂದಿನಿಂದ ವಾಸು ಸಿಗರೇಟ್ ಸೇದುತ್ತಾ ಬಂದು ನಿಂತನು ವಾಣಿಗೆ ಏನೂ ತೋರಲಿಲ್ಲ ಕೂತವಳು ಎದ್ದು ನಿಂತಳು ವಾಸುವೂ ಮಾತನಾಡಲಿಲ್ಲ ಇಬ್ಬರೂ ಮೌನದಿಂದಲೇ ಒಬ್ಬರನ್ನೊಬ್ಬರು ನೋಡಿಕೊಂಡರು. ಎಷ್ಟು ವರ್ಷಗಳ ಅಗಲಿಕೆಯನ್ನೆಲ್ಲಾ ಅಳತೆ ಮಾಡಬೇಕಾಗಿತ್ತು ಆ ನೋಟ!

ವಾಸುವೇ ಎಚ್ಚೆತ್ತು ಮಾತು ಪ್ರಾರಂಭಿಸಿದನು

"ನಿಮ್ಮ ಸಮಾಧಿಗೆ ಭಂಗವಾಯಿತೆ ? ''

"ಇಲ್ಲ ಬನ್ನಿ ಹೊರಗೆ ಹೋದವರು ಆಗಲೇ ಬಂದಿರೇನು ?'' ಎಂದು ಪ್ರಯತ್ನಪೂರ್ವಕವಾಗಿ ಕೇಳಿದಳು ವಾಣಿ

"ಹೌದು, ಶ್ರೀಧರನಿಗೆ ಯಾರೋ ಕಕ್ಷಿದಾರರು ಬಂದರು ಅದಕ್ಕೆ ವಾಪಸ್ ಬರಬೇಕಾಯಿತು ಹಾಗೇ ತೋಟದೊಳಕ್ಕೆ ಬಂದೆ ಬಿದಿಗೆ ಚಂದ್ರನು ನಲಿಯುತ್ತಿದ್ದರೆ, ಒಳಗೆ ಕೂಡಲು ಮನಸ್ಸು ಬರಲಿಲ್ಲ ಆದರೆ ಹೂಗಳೊಂದಿಗೆ ಹೂವಿನ ರಾಣಿಯ ದರ್ಶನಭಾಗ್ಯವೂ ನನಗಿತ್ತೆಂದು ನೆನೆಯಲಿಲ್ಲ .''

"ಓಹೋ, ವಿಲಾಯಿತಿಯಲ್ಲಿ ಕಲಿತ ವಿದ್ಯೆಯೇ ಇದು!'' ಎಂದಳು ವಾಣಿ ನಗುತ್ತಾ

"ಯಾವುದು ?''

"ಹೊಗಳಿಕೆ! Compliments (ಕಾಂಪ್ಲಿಮೆಂಟ್ಸ್) ಕೊಡುವುದು ಅಲ್ಲಿಯ ನಾಗರಿಕತೆಯಲ್ಲವೆ?... ಎಷ್ಟು ಹೊತ್ತು ನಿಲ್ಲುತ್ತೀರಿ.... ಇಲ್ಲಿ ಕುಳಿತುಕೊಳ್ಳಿ '' ಎಂದು ತಾನೂ ಕೂತಳು

"ಒಬ್ಬರೇ ಇದ್ದಿರೇಕೆ ?'' ಎಂದು ಮತ್ತೆ ಕೇಳಿದ ವಾಸು

"ಪ್ರಕೃತಿಶೋಭೆಯಲ್ಲಿ ನಿಮಗ್ನಳಾಗಲು, ಅಂತಹುದೇ ಸ್ವಭಾವವಿರುವವರ ಸಹವಾಸವಾದರೆ, ಆ ತನ್ಮಯತೆಗೆ ಭಂಗಬಾರದೆ, ಇನ್ನೂ ಹೆಚ್ಚುತ್ತೆ ಹಾಗಿಲ್ಲವಾದಾಗ, ಒಬ್ಬಳೇ ಇರುವುದೇ ಒಳಿತೆನಿಸುತ್ತೆ.'' ಎಂದು ವಾಣಿ ಅರ್ಥಗರ್ಭಿತವಾಗಿ ಹೇಳಿದಳು ವಾಸು ತನ್ನ ಬದಿಯಲ್ಲಿದ್ದ

ಗಿಡದಲ್ಲಿನ, ಆಗ ತಾನೇ ಅರಳಿದ ಕೆಂಪು ಗುಲಾಬಿಯ ಮೇಲೆ ಮೃದುವಾಗಿ ಕೈಯಾಡಿಸುತ್ತಿದ್ದ ವಾಣಿ ಹಾಗೆಂದು ಹೇಳಿದಾಗ, ಒಮ್ಮೆ ಅವಳನ್ನು ತನ್ನ ಕಣ್ಣೆತ್ತಿ ನೋಡಿದನು ಅವಳ ಮುಖದಲ್ಲಿಯ ದೈನ್ಯತೆಗೆ ಅವನ ಕಣ್ಣಲ್ಲಿ ನೀರೂರಿತು ಮತ್ತೆ ಮೌನದಿಂದಲೇ ತಲೆಬಾಗಿಸಿ ಕುಳಿತನು

''ವಾಸು....ಎಳೆತನದ ಗೆಳತಿಯಲ್ಲವೆ? ಈ ಬಹುವಚನದ ಮರ್ಯಾದೆಯ ಕರೆ, ಈ ಬಿಗುವಿನ ಗಂಭೀರ, ಏನೆಂದು ನನಗರ್ಥವಾಗಲಿಲ್ಲ'' ಎಂದು ಧೈರ್ಯ ಮಾಡಿ ಕೇಳಿದಳು

''ಆಗಿನ್ನೂ ಸಣ್ಣ ಹುಡುಗಿ ಎಳೆತನಕ್ಕೆ, ಶ್ರೀಮಂತಿಕೆ, ಜಾತಿ ಮತಭೇದ ಇವು ಒಂದೂ ಇಲ್ಲ ಈಗ ಹಾಗಲ್ಲ! ಶ್ರೀಮಂತ ವ್ಯಕ್ತಿ. ಹಾಗೆಂದು ಸಂಘದ ನಿಯಮ ಆಚಾರಗಳಿಗೆ ಒಳಪಡಲೇಬೇಕಲ್ಲವೆ?''

''ಅದೇನೇ ಆಗಲಿ, ನೀವು ಮಾತ್ರ ನನ್ನನ್ನು 'ವಾಣಿ' ಎಂತಲೇ ಕರೆಯಬೇಕು''

'' ಆ ಆಚರಣೆ ನನಗೆ ಮಾತ್ರವಲ್ಲ, ನಿನಗೂ ಸಹ ಆ ಕರಾರಿಗೆ ಒಪ್ಪಿದರೇನೇ. ''

''ಹೂಂ . ಅದು ಹಿಂದಿನ ರೀತಿಧ್ವನಿ! ನೆನಪುಂಟೇ ವಾಸು, ಆಗೆಲ್ಲ ನೀನು ನನ್ನನ್ನು ಕೆಂಪು ಗುಲಾಬಿಯೆಂದೇ ಕರೆಯುತ್ತಿದ್ದೆ?'' ವಾಣಿಯ ಕಂಠವೇಕೊ ನಡುಗುತ್ತಿತ್ತು

''ಹೂಂ, ಅಷ್ಟೇ ಅಲ್ಲ ಇನ್ನೂ ನೆನಪುಂಟು ಅಂದು ನಾನು ಹೇಳಿದ್ದೂ ನೆನಪುಂಟು . ನಿನಗೆ ನೆನಪಿದೆಯೇ ವಾಣಿ?'' ವಾಸುವಿನ ಧ್ವನಿ ಭಾರವಾಗಿ ಗಂಭೀರವಾಗಿತ್ತು.

ವಾಣಿ ತಲೆಬಾಗಿಸಿದಳು ನಾಚಿಕೆಯಿಂದ ಮುಖವು ಕೆಂಪೇರಿತ್ತು. ಅವಳಿಗೆ ಅರಿಯದ ಭಾವಗಳು ಅವಳ ಹೃದಯದಲ್ಲಿ ತರಂಗಗಳಾಗಿ ಉಕ್ಕುತ್ತಿದ್ದವು. ಅತೀವವಾದ ಸಂತೋಷವೋ ಅಥವಾ ದುಃಖವೋ ಎಂದು ಸಹ ತಾನರಿಯಳು. ಆ ನೂತನ ಅನುಭವ ಚೇತೋತ್ಸಾಹಿಯಾಗಿತ್ತು

''ನೆನಪಿಲ್ಲವೇ ವಾಣಿ?''

ವಾಣಿಗೆ ಉತ್ತರವನ್ನು ಹೇಳಲಾಗಲಿಲ್ಲ ತನ್ನ ಕಣ್ಣೆತ್ತಿ ವಾಸುವನ್ನು

ತುಂಬುನೋಟದಲ್ಲಿ ನೋಡಿದಳು ವಾಸುವಿಗೆ ಆ ನೋಟದಲ್ಲಿ ಉತ್ತರ ಸಿಕ್ಕಿತು

'ವಾಣಿ, ಬಲ್ಲೆಯಾ, ಇಂದಿಗೂ ಅಂದಿನ ಎಳೆತನದ ಆ ಮಾತೇ ನನ್ನ ಹೃದಯಗೀತೆಯಾಗಿದೆ? ನಾನು ಬೆಳೆದ ಹಾಗೆಲ್ಲಾ, ನನ್ನಲ್ಲಿದ್ದ ನನ್ನ ಗೆಳತಿಯೂ, ನಮ್ಮ ಸ್ನೇಹವೂ ಬೆಳೆಯುತ್ತಲೇ ಬಂದವು ಇಂದು, ಇಲ್ಲಿ ನಿನ್ನನ್ನು ನೋಡದೆ, ಮತ್ತೆಲ್ಲಿ ನೋಡಿದ್ದರೂ ನಿನ್ನನ್ನು ಗುರುತು ಹಿಡಿಯುತ್ತಿದ್ದೆ. ನೀನು ಬೆಳೆದಂತೆಲ್ಲಾ ನಿನ್ನಲ್ಲಿಯ ಬದಲಾವಣೆಯೆಲ್ಲಾ, ನಿನ್ನಿಂದ ದೂರವಿದ್ದರೂ ನಾನು ಕಾಣುತ್ತಲೇ ಇದ್ದೆ....ವಾಣಿ, ನಮ್ಮ ಗೆಳೆತನದಾಟಗಳನ್ನು ನೀನು ಎಂದಾದರೂ ನೆನೆಯುತ್ತಿದ್ದೆಯಾ?'

''ಹೌದು ವಾಸು, ಮನಸ್ಸಿಗೆ ಬೇಸರ ತೋರಿದಾಗಲೆಲ್ಲಾ ಆ ನೆನಪುಗಳೇ ನನಗಿಷ್ಟು ಉತ್ಸಾಹವನ್ನು ತರುತ್ತಿದ್ದವು ಆದರೆ ವಾಣಿ-ವಾಸು ರೀರ್ವರನ್ನು ಹುಡುಗರಂತೆಯೇ ನೋಡುತ್ತಿದ್ದೆನಾಗಲಿ ಬೇರೆ ವಿಧವಾಗಿ ಚಿತ್ರಿಸಲು ತೋರುತ್ತಿರಲಿಲ್ಲ ವಾಸು, ನಿನಗೆ ಗೊತ್ತಿತ್ತೇ ನಿನ್ನ ಗೆಳೆಯ, ನಿನ್ನ ಎಳತನದ ಗೆಳತಿಯನ್ನು ಮದುವೆಯಾಗುವನೆಂದು?''

''ಹೌದು ವಾಣಿ, ವಿಲಾಯತಿಯಲ್ಲಿದ್ದಾಗ ಶ್ರೀಧರನು ಹೇಳಿದ್ದನು, ನಿನ್ನ ಮತ್ತು ಅವನ ಮದುವೆ ಎಳೆತನದಿಂದಲೇ ನಿಶ್ಚಯವಾಗಿತ್ತೆಂದು. ಅಂತೇ ನಿನ್ನ ಮದುವೆಗೆ ನಾನು ಬರಲಿಲ್ಲ ವಾಣಿ, ಮಧ್ಯಾಹ್ನ ನೀನು ಕೇಳಿದ ಪ್ರಶ್ನೆಗೆ ಈಗ ಉತ್ತರ ಹೇಳುತ್ತೇನೆ... ನನ್ನ ಬಾಳ ಗೆಳತಿ, ಬೇರೊಬ್ಬನನ್ನು ವರಿಸಿದಳೆಂದೇ ನಾನು ಹಾಗೇ ನಿಂತೆ'' ವಾಸುವಿನ ಕಣ್ಣಿಂದ ನೀರು ತೊಟ್ಟಿಕ್ಕುತ್ತಿತ್ತು ಗಿಡದಲ್ಲಿಯ ಗುಲಾಬಿಯನ್ನು ಕಿತ್ತು ಮೆಲ್ಲಗೆ ಕಣ್ಣಿಗೊತ್ತಿಕೊಂಡಾಗ, ಆ ಕಣ್ಣೀರು ಹೂವಿಗೇ ಅಂಟಿತು!

ವಾಣಿಯ ಮೈ ನಡುಗುತ್ತಿತ್ತು ಹೃದಯ ಕವಡಿದಂತಾಗಿತ್ತು. ಇಷ್ಟು ವರ್ಷಗಳೂ ತಾನು ಯಾವುದಕ್ಕೊ ಅತೃಪ್ತಿಯಿಂದ, ನಿರಾಶೆಯಿಂದ ಕಾದಿದ್ದಳು ಈ ಅನುಭವಕ್ಕಾಗಿಯೇ?. ಹೌದು ಈ ಅನುಭವದಲ್ಲಿ ಶಾಂತಿಯೊಂದೆಡೆ, ನೋವೊಂದೆಡೆ ವಾಸುವಿನ ಮಾತುಗಳು ಮಧುರಗೀತೆಯಂತಿದೆ....ಹಾಗೂ ದುಃಖವಾಗಿದೆ....ಹೃದಯ 'ವಾಸೂ ವಾಸೂ'' ಎಂದು 'ಡವಡವ'ನೆ ಹೊಡೆಯುತ್ತಿದೆ .. ವಾಸುವನ್ನು ಕಣ್ಣೆತ್ತಿ ನೋಡಲಾರದೆ ಹೋದಳು .. ಮೆಲ್ಲಗೆ ಕೈಚಾಚಿ, ಅವನ ಕೈಯ್ಯನ್ನೊತ್ತಿ

ನೇವರಿಸಿದಳು ... ಆ ಸುಖಸ್ವಪ್ನದಲ್ಲಿ ಈರ್ವರೂ ಅಪೂರ್ವಶಾಂತಿಯನ್ನನುಭವಿಸಿದವರಂತೆ ಸೀರದವಿಂದ ನಿಶ್ಶೇಷ್ಟಿತರಾಗಿ ಕುಳಿತಿದ್ದರು

"ವಾಸು .. ನಿನ್ನ ಗೆಳತಿಯ ಬಗ್ಗೆ ಎಷ್ಟು ಅಪಾರ್ಥ ಮಾಡಿಕೊಂಡೆ?" ಎಂದಳು ವಾಣಿ. ಅವನ ಕೈಯಿಂದ ತನ್ನ ಕೈಯನ್ನು ಬಿಡಿಸಿಕೊಳ್ಳುತ್ತಾ

"ಏನು ವಾಣಿ!" ಎಂದು ಬೆಚ್ಚಿಬಿದ್ದ ವಾಸು

"ನಿನ್ನ ಗೆಳತಿ, ತಾನಾಗಿ ವರಿಸಿ ಮದುವೆಯಾಗಲಿಲ್ಲ. ತಾಯಿಯನ್ನು ಕಳೆದುಕೊಂಡ ಮಗಳಿಗಾಗಿ, ತನ್ನೆಲ್ಲವನ್ನು ತ್ಯಾಗ ಮಾಡಿದ ತಂದೆಯ ಸಂತೋಷವೇ ತನ್ನ ಸಂತೋಷವೆಂದರಿತು ... ...ನೀನೇಕೆ ಇನ್ನೂ ಮುಂಚೆ ಬರಲಿಲ್ಲ ವಾಸು ? "

"ಬಂದುದಾದರೂ ಫಲವಿಲ್ಲವೆಂದೇ ಬರಲಿಲ್ಲ ವಾಣಿ ಶ್ರೀಮಂತಿಕೆ ಮತ್ತು ಜಾತಿಮತಗಳ ಬಗ್ಗೆ ಸಂಜೀವರಾಯರಿಗೆ ಇರುವ ಗಾಢಾಭಿಪ್ರಾಯಗಳನ್ನು ಅರಿತೂ ಹೇಗೆ ಬರಲಿ? ಅವರನ್ನು ಪ್ರತಿಭಟಿಸುವ ಧೈರ್ಯ ನನಗಿರಲಿಲ್ಲ ...ಮತ್ತು ನನ್ನ ಗೆಳತಿಯ ನಿಸ್ಸಹಾಯತೆಯನ್ನೂ ನಾನು ಚನ್ನಾಗಿ ಬಲ್ಲೆ ...ಹಾಗೆಂದೇ ಈ ನಿರುತ್ಸಾಹ ಜೀವನವನ್ನೆ ಅಪ್ಪಿನಿಂತೆ ವಾಣಿ ನೋಡು .. ನಿನ್ನ ಮನಸ್ಸು ನೋಯಿಸಿದೆನೇ? ಬೇಡ ವಾಣಿ ಕಣ್ಣೀರಿಡಬೇಡ ನಾಳೆ ಊರಿಗೆ ಹೋಗುತ್ತೇನೆ. ಹೋಗುವಾಗ ನನ್ನ ಗೆಳತಿಯ ನಗುಮುಖದ ಚಿತ್ರವನ್ನೇ ಒಯ್ಯಲಿಚ್ಛಿಸುತ್ತೇನೆ ... ...ಇಷ್ಟು ದಿನವೂ ಬರದೆ ತಡೆದೆ ಬಂದು ನಿನ್ನ ನೋಡಿದುದಾದರೆ, ನನ್ನಲ್ಲಿಯ ನಿಗ್ರಹಶಕ್ತಿಯೆಲ್ಲಾ ಕರಗುವದೆಂದೇ ಬರಲಿಲ್ಲ .. ಸುಖಜೀವನದಲ್ಲಿಯ ನಿನಗೆ ಕಣ್ಣೀರೇಕೆ ತರಿಸಬೇಕಂದೇ ಬರಲಿಲ್ಲ .. ಆದರೂ ಎಳೆತನದ ನನ್ನ ಗೆಳತಿ ಬಾಳ-ಗೆಳತಿಯೆಂದೇ ಅಂತರ್ವಾಣಿಯೊಂದು ಹೇಳುತ್ತಿತ್ತು ಅಂತೇ ಬಂದೆ ...ಕ್ಷಮಿಸು ವಾಣಿ. ನಿಶ್ಚಲವಾದ ನೀರಲ್ಲಿ ಕಲ್ಲುಎಸೆದಂತೆ,ನಿನ್ನ ಹೃದಯವನ್ನು ಕದಡಿದೆನೇ ವಾಣಿ"

"ಇಲ್ಲ ವಾಸೂ ನಿರ್ಜೀವವೊಂದನ್ನು ಸಜೀವಳನ್ನಾಗಿ ಮಾಡಿದೆ ಬಾಳಲ್ಲಿ ಅತೃಪ್ತಿಯೇಕೆಂದು ತಿಳಿಯದೆ, ಆ ಪ್ರಶ್ನೆಗೆ ಉತ್ತರವನ್ನು ಹುಡುಕಿ ಹುಡುಕಿ ಬೇಸತ್ತ ನನಗೆ, ಉತ್ತರವನ್ನು ತೋರಿಸಿದೆ ಹೃದಯಾಂಧಕಾರವನ್ನು ದೂಡಿ, ಸೌಂದರ್ಯವನ್ನು ನಿಲ್ಲಿಸಿದೆ....ವಾಸು .... ನೆನವುಂಟೇ .

ಹಿಂದೆ, ಸಾಹಿತ್ಯ ಕಾವ್ಯಗಳೆಂದರೆ, ನಿನ್ನಲ್ಲಿಗೆ ಓಡಿ ಬರುತ್ತಿದ್ದೆ. ಅದರಲ್ಲಿಯ ಅರ್ಥವನ್ನೂ ಸೌಂದರ್ಯವನ್ನೂ ತೋರಿಸುತ್ತಿದ್ದೆ ಆಗ. ಇಂದು ಬಾಳ ಸೌಂದರ್ಯವನ್ನು ತೋರಿಸಿದೆ. ಆದರೆ ಆ ಸೌಂದರ್ಯವನ್ನು ಈರ್ವರೂ ಮನವಣಿಯ ಅನುಭವಿಸಲು ವಿಧಿ ಒಪ್ಪಲಿಲ್ಲ ...'' ವಾಣಿಗ ಇನ್ನು ಮುಂದೆ ಮಾತನಾಡಲಾಗಲಿಲ್ಲ. ಗಳಗಳನೆ ಅತ್ತುಬಿಟ್ಟಳು. ವಾಸುವು ತನ್ನ ಕರವಸ್ತ್ರವನ್ನು ತೆಗೆದು ಅವಳ ಕಣ್ಣೊರಸಿದನು.

"ವಾಣಿ, ವಾಣಿ ." ಎಂದು ಒಳಗಿನಿಂದ ಶ್ರೀಧರನ ಕೂಗು ಕೇಳಿಸಿತು. ಇನ್ನು ವಾಣಿ ಹೊರಡಲನುವಾದಳು. ಒಮ್ಮೆ ತನ್ನ ಮುಖ ವೆತ್ತಿ ವಾಸುವನ್ನು ಕಣ್ತುಂಬ ನೋಡಿದಳು. ಆ ನೋಟದಲ್ಲಿಯ ದೈನ್ಯ ಮತ್ತು ಪ್ರೀತಿ ವಾಸುವನ್ನು ನಡುಗಿಸಿತು. ತನಗೇನಾಗುತ್ತಿತ್ತು. ಅವನರಿಯ. ಅವನ ಸಂಯಮವೆಲ್ಲ ಒಡೆದು ಚೂರಾಗಿತ್ತು.

"ವಾಣಿ .. ವಾಣಿ" ಮತ್ತೆ ಶ್ರೀಧರನ ಕೂಗು.

"ಇರು ವಾಣಿ. ಒಂದು ನಿಮಿಷ . ಇದು ನನ್ನ ನೆನಪಿಗಾಗಿ." ಎಂದು ತನ್ನ ಕೈಯಲ್ಲಿದ್ದ ಕೆಂಪು ಗುಲಾಬಿಯನ್ನು ಅವಳ ತುರುಬಿನಲ್ಲಿಟ್ಟನು.

"ವಾಣಿ, ನೋಡು. ಸಣ್ಣತನದಲ್ಲಿಯ ಅಂದಿನ ಅನುಭವವೂ ಸಹ ಎಷ್ಟು ಅರ್ಥಪೂರಿತವಾಗಿದೆ! ನಿನಗೆ ನೆನಪುಂಟೇ ವಾಣಿ, ಗುಲಾಬಿಯ ಮುಳ್ಳು ತಗಲಿ ನಿನ್ನ ಕೆನ್ನೆಯ ಮೇಲೆ ರಕ್ತ ಬಂದಾಗ ನೀನಂದ ಮಾತು? ಸಣ್ಣ ಹುಡುಗಿಯಾದರೂ, ಎಂತಹ ಅನುಭವದ ಮಾತದು. 'ಇಷ್ಟವಾದ ವಸ್ತುವು ಬೇಕಾದಾಗ ನಾವು ತಿಳಿಯುವುದಿಲ್ಲ!' ಎಂದೆ!" ವಾಣಿ ಮೌನದಿಂದಲೇ ನಿಂತಿದ್ದಳು.

"ವಾಣಿ, ನೀನು ಬಲ್ಲೆಯಾ, ನೀನೆಷ್ಟು ಚೆಲುವೆಯೆಂದು? ಬಾಳ ದಿಂಗಳ ಕಾಂತಿಯಲ್ಲಿ, ಆ ಕೆಂಪು ರೇಶ್ಮೆ ಸೀರೆಯಲ್ಲಿ. ಸೂರ್ಯನ ಕಾಂತಿಗೆ ಬಿಚ್ಚುತ್ತಿರುವ ಈ ಕೆಂದಾವರೆಯಂತೆ ಕಾಣುತ್ತಿರುವೆ!"

"ಹೌದೆ? ಕೆಂದಾವರೆಯ ಮೇಲೆ ಬೀಳುತ್ತಿರುವ ಸೂರ್ಯನ ಕಿರಣಗಳೋ? ಸೂರ್ಯನ ಕಿರಣಗಳು ಅತಿ ಪ್ರಭಾವವುಳ್ಳದ್ದೆಂದೇ, ಈ ಕೆಂದಾವರೆ ಇಂದು ಅರಳಿತೇ ವಾಸು?"

"ವಾಣಿ. ವಾಣಿ!" ಮತ್ತೆ ಶ್ರೀಧರನ ಕರೆ. ಇನ್ನು ವಾಣಿ

ಹೊರಡಲೇಬೇಕು "ಬರಲೆ ವಾಸು?" ಎಂದೊಮ್ಮೆ ಅವನನ್ನು ಕಣ್ತುಂಬ ನೋಡಿ, ಹೊರಟೇ ಹೋದಳು ವಾಣಿ ಎಷ್ಟೋ ಹೊತ್ತು ವಾಸು ಅಲ್ಲೇ ನಿಂತಿದ್ದನು. ಒಂದಾಗುತ್ತಲೊಂದು ಸಿಗರೇಟನ್ನು ಸುಡುತ್ತಲೇ ಇದ್ದನು. "ಏನಾಯಿತು ? ವಾಣಿಯ ಜೀವನ ತಾನು ನೆನದಂತೆ ಸುಖಜೀವನವಲ್ಲ ವಾಯಿತೇಕ ? ತಾನು ಧೈರ್ಯ ಮಾಡಿ, ಅವಳ ತಂದೆಯನ್ನು ಎದುರಿಸಿದ್ದರೆ ?.... ಊಂಹು .... ಸಾಧ್ಯವಿಲ್ಲ ! ವಿಧಿಯನ್ನು ಎದುರಿಸಬಲ್ಲೆನೆ ? ತಾನು ಬಹುಶಃ ಇಲ್ಲಿಗೆ ಬರದೇ ಇದ್ದಿದ್ದರೆ ... ? ಅದೂ ಸಾಧ್ಯವಾಗುತ್ತಿರಲಿಲ್ಲ . ವಾಣಿಯನ್ನು ನೋಡಲೇಬೇಕಾಯಿತು 'ಈ ಕೆಂದಾವರೆ ಇಂದು ಅರಳಿತೇ ವಾಸು ?' ಎಂತಹ ಸುಂದರಾನುಭವದ ಮಾಧುರ್ಯದ ಮಾತದು ? ವಾಣಿ ತನ್ನವಳೇ ! ತನ್ನ ಕೆಂಪು ಗುಲಾಬಿ-- ಅಂದೂ ಅವಳು ತನ್ನವಳೇ, ಇಂದೂ ಅವಳು ತನ್ನವಳೇ, ಎಂದಿಗೂ ತನ್ನವಳೇ ..." ಸಿಗರೆಟ್ ಬೆಂಕಿ ಕೈಸುಟ್ಟಾಗಲೇ ಅವನಿಗೆ ಎಚ್ಚರವಾಯಿತು ಹಾಗೇ ನಿಂತೇ ಇದ್ದ ಅವನನ್ನು ಹುಡುಕಿಕೊಂಡು ಶ್ರೀಧರನು ಅಲ್ಲಿಗೇ ಬಂದನು

" ಬಾರೋ ವಾಸು, ಊಟಕ್ಕೆ ! ಬೆಳದಿಂಗಳಲ್ಲಿ ಹೊಟ್ಟೆ ತುಂಬುತ್ತಿದೆಯೇನೂ ? ಬಾ "

ವಾಸುವು ಏನೂ ಮಾತನಾಡದೆಯೇ ಅವನ ಹಿಂದೆ ಹೊರಟನು

ಮರುದಿನವೇ ವಾಸುವಿನ ಪ್ರಯಾಣ ಹೊರಡುವ ಮುನ್ನ ವಾಸುವಿಗೆ ವಾಣಿಯೊಡನೆ ಕಲೆತು ಮಾತನಾಡಲಾಗಲಿಲ್ಲ ಮೌನದಿಂದಲೇ ನೀರ್ತುಂಬಿದ ಕಣ್ಣಿನೊಡನೆ ಒಬ್ಬರನ್ನೊಬ್ಬರು ಬೀಳ್ಕೊಂಡರು ಹೃದಯಗಳೆರಡೂ ತುಂಬಿ ಒಂದಾಗಿದ್ದವಾದರೂ ಅವರ ಬಾಳಲ್ಲಿ ವಿಧಿಯು ಅಡ್ಡಗಾಲು ಹಾಕಿತ್ತು ಅಂತೇ ಒಬ್ಬರಿಂದೊಬ್ಬರು ದೂರವಾದರು.

೨

ಎರಡು ಮೂರು ತಿಂಗಳಾಯಿತು ವಾಣಿಯ ತರಹವೇ ತೀರ ಬದಲಾಯಿಸಿತು ಎಲ್ಲಿ ಕೂತರೂ, ಎಲ್ಲಿ ನಿಂತರೂ, ಏನು ಮಾಡಿದರೂ ವಾಸುವಿನ ನೆನವೇ ಮುಖವೆಲ್ಲ ತೀರ ಬಿಳಚಿಕೊಂಡಿತ್ತು. ತನ್ನಲ್ಲಿಯ ಈ ಬದಲಾವಣೆಯನ್ನು ಯಾರೂ ಗಮನಿಸಬಾರದೆಂದು, ಇಲ್ಲದ ಉತ್ಸಾಹವನ್ನು ತಂದುಕೊಂಡು ನಗುತ್ತಲೇ ತನ್ನ ನಿತ್ಯ ಜೀವನದ ಕ್ರಮ

ವನ್ನೆಲ್ಲಾ ಎಂದಿನಂತೆ ೇ ಮಾಡಲು ಪ್ರಯತ್ನಿಸುತ್ತಿದ್ದಳು ಒಮ್ಮೊಮ್ಮೆ ಅದು ತೀರ ಕಷ್ಟವೆನಿಸುತ್ತಿತ್ತು ಹಗಲು ರಾತ್ರಿ ಒಬ್ಬಳೇ ಇರಲು ಇಚ್ಛಿಸುತ್ತಿದ್ದಳು ವ್ಯೆಯ್ಯಲ್ಲೇಕೋ ನಿಶ್ಶಕ್ತಿ! ಒಮ್ಮೊಮ್ಮೆ ತಲೆ ತಿರುಗಿ ಕೆಳಗೆ ಬೀಳುವ ಹಾಗಾಗುತ್ತಿತ್ತು ಆ ದಿನ ಸಂಜೆ, ತನ್ನ ಕೋಣೆಯಲ್ಲಿ ಮಲಗೇ ಇದ್ದಳು. ಶ್ರೀಧರನು ಆಫೀಸಿನಿಂದ ಬಂದವನೇ ಅವಳನ್ನು ಹುಡುಕಿಕೊಂಡು ಅವಳ ಕೋಣೆಗೆ ಹೋದನು ಮಲಗಿದ ವಾಣಿಯನ್ನು ಕಂಡು ಬಳಿಯಲ್ಲಿ ಹೋಗಿ ಕುಳಿತು, "ಏನಾಯಿತೇ ವಾಣಿ ' ಏಕೆ ಮಲಗಿದ್ದೀ? ಈ ನಡುವೆಯಲ್ಲಾ ಸರಿಯಾಗಿಲ್ಲವೆಂದು ತೋರುತ್ತೆ?" ಎಂದನು

"ಏನಿಲ್ಲ, ಏನೂ ಸ್ವಲ್ಪ ನಿಶ್ಯಕ್ತಿ, ಅಷ್ಟೇ" ಎಂದಳು ವಾಣಿ

"ವಾಣಿ ನಿಜ ಹೇಳೆ ..ಏನಾದರೂ ಹೇಳೆ ವಾಣಿ ತಾಯಾಗಲಿಕ್ಕಿದ್ದೀಯೆ?" ಎಂದು ಅತ್ಯುತ್ಸಾಹದಿಂದ ಕೇಳಿದನು

' ಏನೊ " ಎಂದು ಜಿಗುಪ್ಸೆಯಿಂದ ಪಕ್ಕಕ್ಕೆ ತಿರುಗಿದಳು

"ವಾಣಿ ಇರು. ಹೋಗಿ ಲೇಡಿ ಡಾಕ್ಟರನ್ನು ಕರೆತರುತ್ತೇನೆ" ಎಂದು ಶ್ರೀಧರನು ಹೋಗಿ ಲೇಡಿ ಡಾಕ್ಟರನ್ನು ಕರೆತಂದನು ಆಕೆಯು ವಾಣಿಯನ್ನು ಪರೀಕ್ಷಿಸಿ, ಮೂರು ತಿಂಗಳ ಗರ್ಭಿಣಿಯೆಂದೂ, ಬಹಳ ನಿಶ್ಯಕ್ತಳಾಗಿದ್ದಾಳೆಂದೂ, ಹೆಚ್ಚು ವಿಶ್ರಾಂತಿ ಅವಶ್ಯಕವೆಂದೂ ಹೇಳಿ ಹೊರಟುಹೋದರು.

ಶ್ರೀಧರನು ಸಂತೋಷದಲ್ಲಿ ಮುಳುಗಿದ್ದನು ವಾಣಿಯ ಬಳಿಗೆ ಬಂದು ಕುಳಿತು "ಏ ..ಕಳ್ಳಿ! ನೀನು ಹೇಳಲೇ ಇಲ್ಲ ನೋಡು! ಈ ಸಮಾಚಾರ ಹೇಳಲು ಡಾಕ್ಟರೇ ಬರಬೇಕಾಯಿತೇನೆ? ನಿಮ್ಮ ತಂದೆಗೆ ಎಷ್ಟು ಸಂತೋಷವಾಗುತ್ತೆ ಬಲ್ಲೆಯಾ?" ಎಂದು ಅವಳ ಮುಖವನ್ನು ನೇವರಿಸಿದನು, ವಾಣಿಗೆ ಅವು ಏನೂ ಬೇಕಾಗಿರಲಿಲ್ಲ "ಅಬ್ಬಾ . ಸ್ವಲ್ಪ ಹೊತ್ತು ನಾನೊಬ್ಬಳೇ ಇರಲು ಬಿಡಿ ನನಗೇಕೋ ಹೇಗೋ ಇದೆ" ಎಂದು ಜಿಗುಪ್ಸೆಯಿಂದ ಹೇಳಿದಳು ಶ್ರೀಧರನಿಗೆ ತಾನು ತಂದೆಯಾಗಲಿರುವೆನೆಂಬ ಸಂತೋಷದಲ್ಲಿ, ಅವಳ ಜಿಗುಪ್ಸೆಯ ಕಾರಣವನ್ನು ತಿಳಿಯಲು ಕೂಡ ತೋರಲಿಲ್ಲ

ವಾಣಿಗೆ ತಾನು ತಾಯಾಗಲಿರುವಳೆಂದು ತಿಳಿದು ಸಂತೋಷವಾಗ

ಲಿಲ್ಲ ಡಾಕ್ಟರು ಬಂದು ಹೇಳುವುದಕ್ಕೆ ಮುಂಚೆಯೇ ಆ ವಿಷಯ ತನಗೆ ತಿಳಿದಿದ್ದರೂ, ಶ್ರೀಧರರೊಡನೆ ಹೇಳಬೇಕೆಂಬ ಉತ್ಸಾಹ ಅವಳಿಗಿರಲಿಲ್ಲ. ವಾಸುವು ಬಂದು ಹೋದಾಗಲಿಂದ, ತನ್ನೆಲ್ಲವೂ ಬಿಸಿನೊಟ್ಟಿಗೇನೇ ಹೋದಂತಿದೆ

ವಾಸುವು ಬರುವ ಮುಂಚೆ, ತನ್ನಲ್ಲಿದ್ದ ಅತೃಪ್ತಿ ಈಗಿಲ್ಲ ಆಗಿನ ಹೃದಯದ ಏಕಾಂತತೆ ಈಗಿಲ್ಲ. ಹೃದಯಪರಿಪೂರ್ಣತೆಯಲ್ಲಿ ತೃಪ್ತಿ ಹೊಂದಿತ್ತು, ವಾಸುವಿನ ಪ್ರೀತಿಯಲ್ಲಿ ತುಂಬಿ ಹರಿಯುತ್ತಿತ್ತು ಅವರ ನೋವು ಅತೀವವಾಗಿತ್ತು ವಾಸುವಿನ ಸಾನ್ನಿಧ್ಯ ಸಹವಾಸವನ್ನು ಬಯಸುತ್ತ, ಶ್ರೀಧರನ ಹೆಂಡತಿಯಾಗಿ ಬಾಳುವುದು ತನಗೆ ದುಸ್ಸಹವಾದ ಬಾಳಾಗಿತ್ತು ಎಳೆತನದಲ್ಲೂ ಪ್ರತಿ ನಿಮಿಷವೂ ವಾಸುವಿನ ಸಹವಾಸವನ್ನೇ ಬಯಸುತ್ತಿದ್ದಳು. ಅಂತೇ ಅದು ತನಗೆ ಯಾವ ಕಷ್ಟವೂ ಇಲ್ಲದೆ ಸಿಕ್ಕುತ್ತಿತ್ತೆಂದು ಸುಖಿಯಾಗಿದ್ದಳು ಆಗ ಇತ್ತೀಚೆಗೆ ಆ ಎಳೆತನದ ನೆನಪುಗಳೇ ತನ್ನ ಜೀವಾಧಾರವಾಗಿವೆ!

ಹೌದು ೧೨-೧೩ ವರ್ಷದ ಹಿಂದೆ. ತಾನು, ವಾಸು ಇಬ್ಬರೂ ತೀರ ಸಣ್ಣವರು ಆಗ ಅವರು ಯಾವ ಸಂಘ ಸಾಮಾಜಿಕ ನಿಯಮದ ಕಟ್ಟಳೆಗಳಿಗೆ ತಲೆಯೊಡ್ಡಬೇಕಾಗಿರಲಿಲ್ಲ ಇಬ್ಬರೂ ಎರಡು ಹಕ್ಕಿಗಳಂತೆ ಸ್ವೇಚ್ಛಾವಿಹಾರಿಗಳಾಗಿದ್ದರು.

ಆ ದಿನ ಸಂಜೆ

ತಾನು, ಸ್ವರ್ಣ, ವಾಸು ಮೂರು ಜನರು ಆ ಊರಿನ ಕೆರೆಯೇರಿ ಮೇಲೆ ನಡೆಯಾಡಲು ಹೊರಟಿದ್ದರು ಸೂರ್ಯನ ಪ್ರತಿಬಿಂಬ ನೀರಲ್ಲಿ ಬಿದ್ದು ಥಳಥಳಿಸುತ್ತಿತ್ತು ಮುಗಿಲಲ್ಲಿ ಹಕ್ಕಿಗಳು ಸಾಲುಸಾಲಾಗಿ ಬಿಳಿಯ ಚುಕ್ಕೆಗಳಂತೆ ಗೂಡು ಸೇರಲು ಹಾರಿಹೋಗುತ್ತಿದ್ದವು ತಾನು ಅಲ್ಲೇ ನಿಂತು ಅವನ್ನೆಲ್ಲಾ ನೋಡುತ್ತ ಅದರಲ್ಲೇ ತಲ್ಲೀನಳಾಗಿದ್ದಳು ವಾಸುವೂ ಅವಳ ಬದಿಯಲ್ಲಿ ನಿಂತಿದ್ದನು ಮುಂದೆ ಇಟ್ಟಿದ್ದ ಸ್ವರ್ಣ ಬೇಸರದಿಂದ ಮತ್ತೆ ಹಿಂದಕ್ಕೆ ಬಂದು, "ಏನೇ ವಾಣಿ? ಹಾಗೆ ನಿಂತೆ? ದಿನವೂ ನೋಡುವ ಸೂರ್ಯ! ನಿತ್ಯವೂ ಹಾರಾಡುವ ಹಕ್ಕಿಗಳು! ಈ ದಿನ ಹೊಸದಾಗಿ ಕಂಡ ಹಾಗ ನೋಡುತ್ತಿದ್ದೀಯಲ್ಲವೆ? ಈ ನಡುವೆ ನೀನು ಹೀಗೇಕೆ? ಎಲ್ಲಿ ನಿಂತರೆ ಅಲ್ಲಿ! ಗಿಡವಲ್ಲಿ

ಒಂದು ಮೊಗ್ಗಾಗಬಾರದು! ಅದು ಅರಳಬಾರದು! ಅದರಲ್ಲೇನೋ ಮಹತ್ವವಿದ್ದ ಹಾಗೆ ನಿನ್ನ ನೋಟ'' ಎಂದಳು.

''ಸ್ವರ್ಣ, ಅದು ಕವಿಹೃದಯ ಕಣೆ! ನೋಡು ವಾಣಿ, ನಮ್ಮ ಕವಿಗಳೆಲ್ಲಾ ಇಂತಹುದನ್ನೆಲ್ಲಾ ಎಷ್ಟು ಚನ್ನಾಗಿ ವರ್ಣಿಸುತ್ತಾರೆ ಬಲ್ಲೆಯಾ? ನಮಗೆ ಸಾಧಾರಣವಾಗಿ ಕಂಡುಬರುವುದೆಲ್ಲಾ **ಅವರಿಗೆ** ವಿಶೇಷ ಬಾ ಆ ಗುಡ್ಡಕ್ಕೆ ಹೋಗಿ ಕುಳಿತುಕೊಳ್ಳುವ. ಅಲ್ಲಿಂದ ಕಾಣುವ ನೋಟ ಬಲೆ ಸೊಬಗು!'' ಎಂದ ವಾಸು

''ನನಗೆ ಅಷ್ಟು ದೂರ ಬರಲಾಗುವುದಿಲ್ಲಪ್ಪಾ, ನೀವೇ ಹೋಗಿ'' ಎಂದು ಸ್ವರ್ಣ ಮನೆಗೆ ಹಿಂತಿರುಗಿದ್ದಳು ತಾನೂ, ವಾಸೂ ಮಾತ್ರ ಹೋಗಿ ಗುಡ್ಡದ ಮೇಲೆ ಕುಳಿತಿದ್ದರು. ''ವಾಣಿ, ಬೆಲ್ಲ, ಉಪ್ಪು, ಕಾರ, ತಂದಿದೆಯೇನು? ನೋಡು, ಈ ಮಾವಿನಕಾಯೊಟ್ಟಿಗೆ ಕಲಸಿ ತಿಂದರೆ ಬಲೆ ಚನ್ನಾಗಿರುತ್ತೆ'' ಎಂದ ವಾಸು

''ಹುಂ ಮಾವಿನಕಾಯಿ ಕೊಯ್ಯಲು ಚಾಕು?''

''ಚಾಕು ಇಲ್ಲ ಬಿಡು ಹಲ್ಲು ಇದೆಯಲ್ಲ! ಸಣ್ಣ ಸಣ್ಣ ಹೋಳು ಮಾಡಿಕೊಡುತ್ತೇನೆ. ನೀನು ಕಲಸು''

ಅಂತೇ ಮಾವಿನಕಾಯಿಗೆ ಬೆಲ್ಲ, ಉಪ್ಪು, ಕಾರ ಕಲಸಿ ಇಬ್ಬರೂ ತಿಂದರು

''ಚೆನ್ನಾಗಿದೆಯೋನೇ ವಾಣಿ?''

''ಹೂಂ....ಲೋ ವಾಸು. ಆ ಪದ್ಯ ಹೇಳು''

'ಯಾವುದು?''

''ಅದೇ ಕಣೋ ಕನಸು, ಅರಣ್ಯ, ಎಲ್ಲ ಬರುತ್ತಲ್ಲ ಅದು''

''ಓ! ಅದೇ!

'ನಿದ್ದೆಯ ಲೋಕದ ಕನಸಿನ ಬೀದಿ,
ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ'

ವಾಸುವಿನ ಧಾಟಿ ಹೋಗುತ್ತಲೇ ಇತ್ತು ವಾಣಿ ಅವನನ್ನೇ ನೋಡುತ್ತಾ ಮೌನದಿಂದ ಕುಳಿತಿದ್ದಳು

''ಎಷ್ಟು ಚೆನ್ನಾಗಿ ಹೇಳುತ್ತೀಯೋ ವಾಸು? ಈಗ ಇವೆಲ್ಲಾ ನನಗೆ ನೀನು ಹೇಳಿಕೊಡುತ್ತೀಯಲ್ಲವೆ? ದೊಡ್ಡವಳಾದ ಮೇಲೂ

ನನಗೇನಾದರೂ ಕಲಿಯಬೇಕೆಂದರೆ ನೀನೇ ಹೇಳಿಕೊಡಬೇಕಪ್ಪ ''

'ದೊಡ್ಡವಳಾದ ಮೇಲೆ ನಿನ್ನ ಗಂಡ ಹೇಳಿಕೊಡುತ್ತಾನೆ'

''ಥೂ ..ನನಗೆ ಗಂಡ ಬೇರ ಬೇಡಪ್ಪ !''

''ಹಾಗೆಂದರೆ ಕೇಳ್ತಾರೇನೇ ವಾಣಿ? ನಿಮ್ಮಪ್ಪ ನಿನಗೆ ಬೇಗ ಮದುವೆ ಮಾಡುತ್ತಾರಂತೆ ''

''ಹಾಗಾದರೆ ನಾನು ನಿನ್ನನ್ನೇ ಮದುವೆಯಾಗುವುದು ಮದುವೆ ಯಾದರೆ, ಯಾವಾಗಲೂ ಜತೆಯಲ್ಲಿರಬಹುದಲ್ಲವೇ ವಾಸು?''

'ಹೂಂ . ಇನ್ನು ಹೋಗೋಣ ಕತ್ತಲಾಗುತ್ತಿದೆ ವಾಣಿ, ಮೆಲ್ಲಗ ಇಳಿ, ಜಾರುತ್ತೆ'' ಎಂದು ಅವಳ ಕೈ ಹಿಡಿದು ಗುಡ್ಡ ಇಳಿಸಿದ್ದ. ಇಬ್ಬರೂ ಮಾತಾಡುತ್ತ ಬರುತ್ತಿರಲು ಮನೆ ಬಂತು ಮನೆಯ ಬಾಗಿಲ ಹತ್ತಿರ ನಿಂತು ವಾಸು ''ಹೋಗ್ತೀಯಾ ವಾಣಿ? ಗುಡ್ಡದಲ್ಲಿಯ ಮಾತು ಮರೆಯಬೇಡ'' ಎಂದಿದ್ದ.

ಅವರಂದು ಅದು ತೀರ ಹುಡುಗತನದ ಮಾತಾಗಿತ್ತು. ಇಂದು ಆ ಮಾತೇ ನೆನಪಾದಾಗ? ತಾನು ಆ ಮಾತನ್ನು ಎಷ್ಟರ ಮಟ್ಟಿಗೆ ನಿಲ್ಲಿಸಿದ್ದಳು? ವಾಸು ಅದನ್ನೇ ತನ್ನ ಹೃದಯದಲ್ಲಿರಿಸಿಕೊಂಡು, ಈ ನಿರಾಶಾ ಜೀವನವನ್ನು ಅಪ್ಪಿದ್ದನು. ಆದರೆ ತಾನು ? ಅಂದಿನ ಮಾತು ತನ್ನ ಮೇಲೆ ಪರಿಣಾಮಕಾರಿಯಾಗುವಷ್ಟು ವಯಸ್ಸು ಅಂದು ತನಗಿರಲಿಲ್ಲ... ಹೌದು, ಅಪ್ಪನು ಮೆಚ್ಚಿದ ಪ್ರೇಮಧರನೊಡನೆ ತನ್ನ ಮದುವೆಯಾಗಿದೆ. ಅಂದಿನ ಮಾತನ್ನು ನಿಲ್ಲಿಸಿ, ಆಚರಿಸಿ, ಅವಲಂಬಿಸುವ ಸ್ವಾತಂತ್ರ್ಯ ತನಗಿರಲಿಲ್ಲ ಇದನ್ನು ವಾಸುವೂ ಬಲ್ಲ. ಸಂಘ-ಸಮಾಜಗಳ ನಿಯಮಗಳಲ್ಲಿ ತಾನು ಇಂದು ವಾಸುವನ್ನು ಪ್ರೀತಿಸುವುದು ತಪ್ಪು! ಆದರೂ ತಾನು ಅವನನ್ನು ಪ್ರೀತಿಸುತ್ತಾಳೆ. ಯಾವ ಸಮಾಜದ ನಿರ್ಬಂಧವೂ ಇಲ್ಲದೆ, ಸ್ವಚ್ಛಂದ ಸ್ವಾತಂತ್ರ್ಯವುಳ್ಳ, ತನ್ನದೇ ಆದ ತನ್ನ ಹೃದಯದಲ್ಲಿ ಅವನನ್ನು ಆರಾಧಿಸುತ್ತಾಳೆ. ಅರ್ಥಶೂನ್ಯವಾಗಿದ್ದ ಅವಳ ಬಾಳು ವಾಸುವಿನ ಪ್ರೀತಿಯಲ್ಲಿ ಈಗ ಅರ್ಥಪೂರಿತವಾಯ್ತು. ವಾಸುವಿನ ಸ್ನೇಹ ಅವಳ ಜೀವನದ ಸಂಜೀವಿನಿ. ಹೌದು! ತನ್ನೆಲ್ಲ ಆದರ್ಶ, ಆಕ್ರಿಯೆಗಳ, ಜೀವನದ ಸೌಂದರ್ಯ ಗಾಂಭೀರ್ಯಗಳ ಬಗ್ಗೆ ತನಗಿರುವ ಉತ್ಸಾಹ, ಆವೇಶ, ವಾಸುವಿನಲ್ಲೂ ಪ್ರತಿಬಿಂಬಿಸುತ್ತಿವೆ. ಅವನ ಸ್ನೇಹದಲ್ಲಿ ತಾನು

ಎಂತಹ ತ್ಯಾಗಕ್ಕೂ ಸಿದ್ಧಳು ಅವರ ಸಂಸಾರವನ್ನು ಪ್ರತಿಭಟಿಸಬಲ್ಲಳೇ? . ಹೂಂ ..ವ್ಯಕ್ತಿಯ ಸುಖ ದುಃಖಗಳು, ದುಗುಡಗಳು ಸಮಾಜಕ್ಕೆ ಬೇಕಿಲ್ಲ! ಹಾಗಿದ್ದರೂ ಆ ಸಾಮಾಜಿಕ ನಿಯಮಗಳಿಗೆ ವ್ಯಕ್ತಿ ತಲೆ ಬಾಗಿಸಬೇಕೇತಕ್ಕೆ? ಅವಳಲ್ಲಿ ಈ ಯೋಚನಾ ತರಂಗಗಳು ಉಕ್ಕುತ್ತಲೇ ಇದ್ದವು. ಅದಕ್ಕೆ ತುದಿಮೊದಲೇ ಇಲ್ಲ. ಈ ವೇದನೆಯ ಭಾರವನ್ನು ಹೊತ್ತ ಅವಳಿಗೆ ತನ್ನಲ್ಲಿ ಬೆಳೆಯುತ್ತಿರುವ ಹೊಸ ಜೀವನದ ಬಗ್ಗೆ ಆಸಕ್ತಿಯೇ ಇರಲಿಲ್ಲ. ತಾನೂ ಒಬ್ಬ ಆದರ್ಶ ಸ್ತ್ರೀಯಾಗಿ, ಆದರ್ಶ ಸತಿಯಾಗಿ, ಆದರ್ಶ ತಾಯಾಗಿ ಜೀವನದ ಮಾಧುರ್ಯವನ್ನು ಸಂಪೂರ್ಣ ನವುರಿನ ದಾಂಪತ್ಯದಲ್ಲಿ ಅನುಭವಿಸಬೇಕೆಂದ ಅವಳ ಎಳೆತನದ ಸ್ವಪ್ನ ಬಿತ್ತು. ಇಂದು ತನ್ನಲ್ಲಿರುವ ಪ್ರೀತಿಯ ಮಗುವಿಗೆ ತಾನು ಆದರ್ಶ ತಾಯಾಗುವಳೆ? ತನಗೇನಾಯಿತು? ತಾನು ವಾಸುವಿನಿಂದ ದೂರವಿರಲಾರಳು! ತನ್ನ ಮತ್ತು ಅವನ ಪ್ರೀತಿ ಯಾವ ರೀತಿ ಪರಿಣಾಮಕಾರಿಯಾಗುತ್ತೆ? ಅಬ್ಬಾ . ಏನು ಬಾಧೆ! ಎಷ್ಟು ನೋವು ವಾಸು .. ಬಾ . ಗುಲಾಬಿ ಮುಳ್ಳಿನಿಂದ ರಕ್ತ ಬಂದರೆ, ಬರಸಲು ಓಡಿ ಬಂದೆ ಇಂದು ನಿನ್ನ ವಾಣಿ ಎಷ್ಟು ಕಷ್ಟಕ್ಕೆ ಗುರಿಯಾಗಿದ್ದಾಳೆ! . ಬಾ ವಾಸು ನಾನು ನಿನ್ನವಳು . ಎಂದಿಗೂ ನಿನ್ನವಳು ಸಂತೈಸುವುದ ಕಟ್ಟಳೆಗಳು ನನಗಿಲ್ಲ ಅಬ್ಬಾ . ವಾಸು ..ವಾಸು !''

೩

ಮೊದಲೇ ಮೌನಿಯಾದ ವಾಸು, ವಾಣಿಯ ಊರಿಂದ ಬಂದ ನಂತರ ಇನ್ನಷ್ಟು ಮೂಕನಂತಾದನು. ಇತ್ತೀಚೆಗೆ ಸ್ವರ್ಣಳಿಗೆ ಅಣ್ಣನ ಹಿಡವಳಿಕೆಯೇ ಬಗೆಹರಿಯದ ಸಮಸ್ಯೆಯಾಗಿತ್ತು. ತನ್ನಣ್ಣನ ಮತ್ತು ವಾಣಿಯ ಎಳೆಯ ಗೆಳೆತನದ ಬಗ್ಗೆ ತನಗೆ ಗೊತ್ತಿತ್ತಾಗಲಿ, ಇಂದಿಗೂ ಅದೇ ಪ್ರೀತಿಯೇ, ಅಣ್ಣನನ್ನು ಅವಿವಾಹಿತನನ್ನಾಗಿರಿಸಿದೆ ಎಂಬ ಮಾತು ಸ್ವರ್ಣಳಿಗೆ ತಿಳಿಯಲಿಲ್ಲ. ಅಣ್ಣನ ಅಂತರ್ಯವನ್ನರಿಯಲು ಎಷ್ಟು ಬಾರಿ ಪ್ರಯತ್ನಿಸಿದ್ದಳಾದರೂ ಅವನಲ್ಲಿಯ ಆವುದೋ ಶಕ್ತಿ ಅವಳನ್ನು ದೂರವೇ ಇಟ್ಟಿತ್ತು.

ಆ ದಿನ ಅವನು ವಾಣಿಯ ಊರಿಂದ ಬಂದೊಡನೆ ಎಷ್ಟೊ ಉತ್ಸಾಹದಿಂದ ಕೇಳಿದ್ದಳು. 'ಹೇಗಿದ್ದಾಳಣ್ಣಾ ವಾಣಿ ಈಗ'' ಎಂದು.

"ಚೆನ್ನಾಗಿದ್ದಾಳೆ" ಎಂದಿಷ್ಟೇ ಹೇಳಿದ್ದ

" ಅದಲ್ಲಣ್ಣಾ ಬದಲಾಯಿಸಿದ್ದಾಳೆಯೆ ? ಆ ಮುಂಗುರುಳು, ಕಣ್ಣು ಆ ನಗು ...ಎಲ್ಲ ಹಾಗೇ ಇದ್ದಾಳೆಯೆ ?"

"ಏನೋ ! ನಗೆ ಕಾಣಲಿಲ್ಲ ಮತ್ತೆಲ್ಲಾ ಹಾಗೇ ಇದ್ದಾಳೆ ನಿನ್ನನ್ನು ಕೇಳಿದಳು."

"ಗಂಡನೊಡನೆ ಸುಖವಾಗಿದ್ದಾಳೇನಣ್ಣಾ ?"

"ಏನೋ ! ನಾನು ಕೇಳಲಿಲ್ಲ"

ವಾಣಿಯ ಬಗ್ಗೆ ಎಷ್ಟೋ ಕೇಳಬೇಕೆಂದಿದ್ದಳು. ಅಣ್ಣನ ಮುಖ ಮುದ್ರೆ ಅವಳ ಕುತೂಹಲವನ್ನು ತೃಪ್ತಿಪಡಿಸಲಿಲ್ಲ ಆ ದಿನಕ್ಕೇ ಮುಗಿ ದಿತ್ತು ವಾಣಿಯ ಪ್ರಸ್ತಾಪ ಆಗೀಗ ಅಣ್ಣನ ಮುಖದಲ್ಲಿಯ ನೋವಿನ ಗೆರೆ, ಕಣ್ಣೀರಿನ ಛಾಯೆಯನ್ನೆಲ್ಲಾ ಗಮನಿಸುತ್ತಿದ್ದ ಸ್ವರ್ಣ, ಅಣ್ಣನ ನೋವಿಗೆ ಮೂಲವನ್ನು ಊಹಿಸಲು ಪ್ರಯತ್ನಿಸುತ್ತಿದ್ದುದೆಲ್ಲ ಫಲಕಾರಿ ಯಾಗಲಿಲ್ಲ ವಾಸುವಿಗೆ ಶ್ರೀಧರನಿಂದ ಆಗೀಗ ಪತ್ರಗಳು ಬರುತ್ತಿದ್ದ ವಾಗಲಿ, ವಾಣಿಯ ವಿಚಾರ ಹೆಚ್ಚಾಗಿ ತಿಳಿಯುತ್ತಿರಲಿಲ್ಲ. ಇತ್ತೀಚಿನ ಪತ್ರದಲ್ಲಿ ಮಾತ್ರ, ತಾನು ತಂದೆಯಾಗಲಿರುವನೆಂಬ ಸಂತೋಷವನ್ನು ಸೂಚಿಸುತ್ತ ಬರೆದಿದ್ದನು

ಆಗ ತಾನೇ ಆಫೀಸಿನಿಂದ ಬಂದು, ಸ್ವರ್ಣ ಕೊಟ್ಟ ಕಾಫಿಯನ್ನು ಕುಡಿದು ಆರಾಮುಕುರ್ಚಿಯಲ್ಲಿ ಕುಳಿತು ವಾಣಿಯನ್ನೇ ನೆನೆಯುತ್ತಿ ದ್ದನು ವಾಸು :

ಎಂತಹ ಸರಳವಾದ ಮನಸ್ಸು ವಾಣಿಯದು ! ಅವಳ ಮನಸ್ಸು, ಹೃದಯ ಸಣ್ಣವಳಾಗಿದ್ದಾಗ ಇದ್ದಂತೆಯೇ ಇದೆ ಕಣ್ಣಲ್ಲಿ ಹಿಂದಿನ ಅದೇ ಸೌಮ್ಯ ಕಾಂತಿ. ಮುಖದಲ್ಲಿಯ ಆ ಮುಗ್ಧತೆಯ ಸುಖಮುದ್ರೆ, ಆ ತಿಳಿನೋಟ, ಅವಳ ತಿಳಿ ಹೃದಯವನ್ನು ತೋರಿಸುತ್ತಿತ್ತು. ಹೌದು... ತನ್ನ ವಾಣಿ ಅಂದು ಹೇಳಿದ ಮಾತು ನಿಜ. ಅವಳ ಹೃತ್ಕಮಲ ತನ್ನ ಪ್ರೀತಿಯ ಕಿರಣಗಳಲ್ಲೇ ಅರಳಿತು ತಾನು ಅವಳಲ್ಲಿ ತನ್ನ ಹೃದಯ ವನ್ನು ನೋಡಿಕೊಳ್ಳುವ ತನಕ ಅವಳ ಹೃದಯವೂ ಮೊಗ್ಗಾಗೇ ನಿಂತಿತ್ತು "ಹೃದಯಾಂಧಕಾರವನ್ನು ದೂಡಿ ಸೌಂದರ್ಯವನ್ನು ನಿಲ್ಲಿ ಸಿದೆ, ವಾಸು ಹೌದು, ಈ ಕೆಂದಾವರೆ, ಸೂರ್ಯನ ಕಿರಣಗಳು ಅತಿ

ಪ್ರಭಾವವುಳ್ಳದ್ದೆಂದೇ ಇಂದರಳಿತೇ ವಾಸು?" ಎಂದಿದ್ದಳು ತನ್ನಲ್ಲಿ ಅವಳಿಗೆ ಎಷ್ಟು ನಂಬುಗೆ ವಿಶ್ವಾಸ! ಅವಳ ಸ್ನೇಹಸ್ಫೂರ್ತಿಯಲ್ಲಿ ತನ್ನ ಜೀವನದ ಆದರ್ಶವನ್ನೆಲ್ಲಾ ಕಾಣಬಹುದಾಗಿತ್ತು. ಅವಳ ಸ್ನೇಹ, ಅವಳ ಹೃದಯ ತನ್ನದೇ ಆಗಲಿ, ವಿವಾಹಬಂಧನವೊಂದು ತನ್ನಿಂದ ಅವಳನ್ನು ದೂರ ಇರಿಸಿತ್ತು. ತನ್ನಲ್ಲಿಯ ಸಂಯಮ ನಿಗ್ರಹಗಳ ಮೇಲೆ ಆಧಾರವಿಟ್ಟೇ ತಾನು ಅವಳ ಮನೆಗೆ ಹೋಗಿದ್ದನು. ಆದರೆ ತಾನವಳಲ್ಲಿಗೆ ಹೋಗುವಷ್ಟೊತ್ತಿಗೆ ತಾನೇ ನಿರ್ಬಲನಾದನು. ಆದರೆ ಅಂದಿನ ಹೃದಯಗಳ ಮಿಲನದಲ್ಲಿ ತಾನು ಅನುಭವಿಸಿದ ಅನುಪಮವಾದ ಆನಂದ, ಸೌಂದರ್ಯ, ಜೀವನದಲ್ಲಿ ಎಷ್ಟೇ ಕಷ್ಟವನ್ನೂ ತಡೆಯಬಲ್ಲದು. ವಾಣಿ ತನ್ನವಳೇ. ಎಂದಿಗೂ ತನ್ನವಳೇ..! "ವಾಸು. ವಾಸು!" ಇದೇನು! ವಾಣಿಯ ಧ್ವನಿ! ಎಲ್ಲೋ ನೋವಿನಲ್ಲಿದೆ? ತನ್ನನ್ನು ವಾಣಿ ಕರೆಯುತ್ತಿರುವಳೆ? ವಾಣಿಯ ಬಳಿ ಹೋದರೆ, ತನ್ನ ಸಂಶಯವೆಲ್ಲಾ ಒಡೆದು ಚೂರಾಗುವುದು. ತನ್ನನ್ನು ತಾನೇ ನಂಬಲಾರ. ಅಂತೇ ಆಗ ಬಂದುಬಿಟ್ಟ. ಮತ್ತೆ ಈ ದಿನ ಕರೆಯೇನು? "ವಾಸು, ವಾಸು" ಮತ್ತೆ ಮತ್ತೆ ಅದೇ ಕರೆ.. ಹೌದು ವಾಣಿ ತನ್ನನ್ನು ಕರೆಯುತ್ತಿರುವಳು.. ಹೋಗಲೇಬೇಕು ...

ಎದ್ದು ಬೇಗ ಬೇಗ ಬ್ಯಾಗ್‌ನಲ್ಲಿ ಒಂದೆರಡು ಬಟ್ಟೆಯನ್ನು ಹಾಕಿಕೊಂಡು ಸ್ವರ್ಣಳಿಗೆ ಎಲ್ಲೋ ಅವಸರದ ಕೆಲಸದ ನಿಮಿತ್ತ ಹೋಗುತ್ತಿದ್ದೇನೆಂದು ಹೇಳಿ ಹೊರಟೇ ಬಿಟ್ಟ. ರೈಲಿಗೆ ಇನ್ನೂ ಐದು ನಿಮಿಷವಿತ್ತು. ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ಕಾಣುತ್ತಿತ್ತು. ರೈಲು ವಾಣಿಯಿದ್ದ ಊರು ತಲುಪಿದ್ದೇ ತಡ ಟ್ಯಾಕ್ಸಿ ಮಾಡಿಕೊಂಡು ಶ್ರೀಧರನ ಮನೆಗೆ ಬಂದ. ಮನೆಯ ಮುಂದೆ ಇನ್ನೂ ಒಂದೆರಡು ಕಾರುಗಳು ನಿಂತಿದ್ದವು. ಮನೆಯಲ್ಲಿ ಸ್ಮಶಾನಮೌನವಾವರಿಸಿತ್ತು. ವಾಸುವಿಗೇಕೋ ಹೆದರಿಕೆಯಿಂದ ಹೃದಯವು ಅತಿ ವೇಗವಾಗಿ ಹೊಡೆದುಕೊಳ್ಳುತ್ತಿತ್ತು. ತೋಟ ದಾಟಿ, ಮನೆಯೊಳಕ್ಕೆ ಹೋಗುವಾಗ ದಾರಿಯಲ್ಲಿನ ಕೆಂಪು ಗುಲಾಬಿಯೊಂದು ಅವನಿಗೆ ತಗಲಿ ದಳಗಳೆಲ್ಲಾ ಬಿಚ್ಚಿ ಕೆಳಗುದುರಿತು. ಯಾವುದನ್ನೂ ಗಮನಿಸದೆ ಒಳಕ್ಕೆ ಹೋದ. ಮನೆಯಲ್ಲಿಯ ನಿಶ್ಶಬ್ದತೆ ಯಾವುದೋ ಒಂದು ಅನಾಹುತವನ್ನು ಸೂಚಿಸುತ್ತಿತ್ತು. ಮನೆಯ ಹಾಲಿನಲ್ಲಿ ಕಾಲಿಟ್ಟೊಡನೆಯೇ ಅಲ್ಲೇ ಸೋಫಾ

ಮೇಲೆ ಕುಳಿತಿದ್ದ ಶ್ರೀಧರನು ಎದ್ದು, “ ವಾಸು ! ವಾಸು ಬಂದೆಯಾ ನಾಣಿ ಇಲ್ಲ ವಾಸು .! ” ಎಂದು ಗಟ್ಟಿಯಾಗಿ ಅಳಲು ಶುರುಮಾಡಿದನು ವಾಸುವಿನ ಮೈ ಥರಥರ ನಡುಗುತ್ತಿತ್ತು “ ಏನಾಯಿತು ಶ್ರೀಧರ್ ! ಎಲ್ಲಿ? ವಾಣಿ ಎಲ್ಲಿ ? ” ಎಂದು ಧಡಧಡನೆ ತಿಳಿದವನಂತೆ ವಾಣಿಯ ಕೋಣೆಯೊಳಕ್ಕೇ ಹೋದನು. ವಾಣಿ ತನ್ನ ಮಂಚದ ಮೇಲೆ ಮಲಗಿದ್ದಳು ಎಂದಿನಂತಿನ ಅದೇ ತಿಳಿಯಾದ ನಗುಮುಖ ಯಾರೂ ಏನೂ ಹೇಳದಿದ್ದರೂ, ವಾಸುವರಿತಿದ್ದ, ವಾಣಿಯ ಜೀವ ದೇಹದಿಂದ ಹಾರಿಹೋಗಿದೆಯೆಂದು ! ಅಂತ್ಯೇ ಅವಳ ಆ ನೋವಿನಲ್ಲಿಯು ಕರ ! ವಾಣಿಯ ಮಂಚದ ಬದಿಯಲ್ಲಿ ಕುಳಿತು ಸಂಜೀವರಾಯರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು ನರ್ಸ್ ಮತ್ತು ಲೇಡಿ ಡಾಕ್ಟರರು ನಿಶ್ಚೇಷ್ಟಿತರಾಗಿ ನಿಂತಿದ್ದರು ಬಂದವನೇ ವಾಸು ಯಾರನ್ನೂ ಲಕ್ಷಿಸದೆ ಮಲಗಿದ್ದ ವಾಣಿಯನ್ನು ಅಪ್ಪಲೆಂದೇ ಧಾವಿಸಿದನು. ಮತ್ತೆ ತನ್ನ ಸಂಯಮವ ನಿಲ್ಲಿಸಿತು ಅಂತೆ ಅವಳ ಬದಿಯಲ್ಲಿ ಕುಳಿತು ಮುಖ, ಮೈ, ಕೈಯೆಲ್ಲಾ ಒಮ್ಮೆ ನೇವರಿಸಿದನು ಎಷ್ಟೋ ಹೊತ್ತು ಅವಳನ್ನೇ ದಿಟ್ಟಿಸಿ ನೋಡುತ್ತಿದ್ದಾಗ ಆ ಸುಂದರ ಸೌಮ್ಯ ಮುಖ ಅವನನ್ನು ನೋಡಿ ನಕ್ಕ ಹಾಗಾಯಿತು “ಬಾ ವಾಸು, ಬಂದೆಯಾ ? ನೋಡು ನಾನು ನಿನ್ನವಳು ” ಎಂದ ಹಾಗಾಯಿತು ತನ್ನೆರಡು ಕೈಗಳಿಂದಲೂ ತನ್ನ ಮುಖವನ್ನು ಮುಚ್ಚಿ ಕುಳಿತನು ಕೆಳಗೆ ಅಳುತ್ತಿದ್ದ ಶ್ರೀಧರನ ಧ್ವನಿ ಅಲ್ಲಿಗೆ ಕೇಳುತ್ತಿತ್ತು ತನಗ ಕಣ್ಣಲ್ಲಿ ಒಂದು ತೊಟ್ಟು ನೀರು ಕೂಡ ಬರಲಿಲ್ಲ ಒಂದೇ ಒಂದು ಬಾರಿ, ಆ ನಿರ್ಜೀವ ವಾಣಿಯ ಕೈಗಳನ್ನು ತೆಗೆದುಕೊಂಡು ತನ್ನ ಕಣ್ಣಿಗೆ ತುಟಿಗೆ ಒತ್ತಿಕೊಂಡು ಎದ್ದನು. ಅಲ್ಲೇ ನಿಂತಿದ್ದ ಡಾಕ್ಟರರನ್ನು, “ ಏನಾಗಿತ್ತು ? ” ಎಂದಿಷ್ಟೆ ಕೇಳಿದನು

“ ಎಬಾರ್ಷನ್ ( Abortion ) ಸೆಪ್ಟಿಕ್ ಕೇಸು ( Septic case ) ” ಎಂದರು ಅದನ್ನು ಪೂರಾ ಕೇಳಿಕೊಂಡನೋ ಇಲ್ಲವೋ ಕೆಳಗಿಳಿದು ತೋಟದಲ್ಲಿ ಕೆಂಪು ಗುಲಾಬಿ ಗಿಡಗಳ ಮಧ್ಯ ಬಂದು ಕುಳಿತನು ಎಷ್ಟೋ ಹೊತ್ತು ಹಾಗೇ ಇದ್ದನು. ಅದೇ ಬಿದಿಗೆಯ ಚಂದ್ರ ಅಂದೂ ಬಂದಿದ್ದನಾಗಲಿ, ಅದನ್ನು ನೋಡಲಾರದೆ ವಾಸು ಕಣ್ಮುಚ್ಚಿಕೊಂಡು ಕುಳಿತನು.

೪

ಹತ್ತು ಹನ್ನೆರಡು ವರ್ಷಗಳು ಕಳೆದು ಹೋದವು. ವಾಣಿ ಸ್ಮೃತಿಯಲ್ಲಿ ಮಾತ್ರ ನಿಂತಳು. ಶ್ರೀಧರನು ಮತ್ತೆ ಮದುವೆಯಾಗಿ ಎರಡು ಮೂರು ಮಕ್ಕಳ ತಂದೆಯಾಗಿದ್ದನು. ಅವನಿಗೆ ವಾಣಿಯ ನೆನಪು ಸಹ ಇದೆಯೋ ಇಲ್ಲವೋ!

ವಾಸುವು ಮಾತ್ರ, ತನ್ನೆಲ್ಲಾ ಕೆಲಸವನ್ನೂ ಯಾಂತ್ರಿಕವಾಗಿ ನಡೆಸುತ್ತಿದ್ದನು. ತೀವ್ರವಾದ ವೇದನೆಯೊಂದು ಅವನ ಮುಖವನ್ನು ಆವರಿಸಿತ್ತು. ಆಫೀಸಿನಿಂದ ಬಂದವನೇ, ತಾನೇ ನೀರು ಹಾಕಿ ಬೆಳಸಿದ ಕೆಂಪು ಗುಲಾಬಿಗಳ ಮಧ್ಯೆ ಸ್ವಲ್ಪ ಹೊತ್ತು ಕಳೆಯುವನು. ಸ್ವರ್ಣಳ ಮಕ್ಕಳೊಟ್ಟಿಗೆ ಸ್ವಲ್ಪ ಆಡುವನು. ಮಕ್ಕಳೊಂದಿಗೆ ಇದ್ದಾಗಲೇ ಅವನ ಮುಖದಲ್ಲಿ ಒಂದಿಷ್ಟು ನಗು. ಸ್ವರ್ಣಗೆ ಅಣ್ಣನ ಈ ಬಗೆ ಅರ್ಥವಾಗಲಿಲ್ಲ. ದಿನದಿನಕ್ಕೆ ಈ ಲೋಕದಿಂದಲೇ ದೂರವಾಗುವವನ ಹಾಗೆ ಇರುತ್ತಿದ್ದನು. ಆಗ ತಾನೇ ಆಫೀಸಿನಿಂದ ಬಂದು, ಸ್ವರ್ಣ ಕೊಟ್ಟ ಕಾಫಿ ಕುಡಿದು, ತನ್ನ ಕುರ್ಚಿಯ ಮೇಲೆ ಕುಳಿತು ಕಿಟಕಿಯಿಂದ ಆಚೆ ನೋಡುತ್ತಿದ್ದನು. ಆ ನೋಟ ಯಾವ ಲೋಕದಲ್ಲಿದ್ದ ವಾಣಿಯನ್ನು ಹುಡುಕುತ್ತಿತ್ತೋ? ಇಷ್ಟರಲ್ಲೇ, ಸ್ವರ್ಣಳ ಮಗಳು ಆರು ವರ್ಷದ ಇಂದಿರ, 'ಮಾವಯ್ಯ ಇದೋ, ಈ ಕೆಂಪು ಗುಲಾಬಿ ಗೊಂಚಲು ಅಮ್ಮ ನಿನ್ನ ರೂಮಲ್ಲಿ ಇಡಲಿಕ್ಕೆ ಹೇಳಿದಳು'' ಎಂದು ಬಂದಳು. ಕಣ್ಣಂಚಿನ ನೀರನ್ನು ಒರೆಸಿಕೊಳ್ಳುತ್ತಾ ವಾಸು 'ಅದೇಕಮ್ಮಾ ಗಿಡದಿಂದ ಕಿತ್ತೆದೆ ಇಂದೂ, ಬಾಡಿಹೋಗುತ್ತಲ್ಲಮ್ಮಾ'' ಎಂದ ಅತಿ ನೋವಿನಿಂದ.

"ಇಲ್ಲ ಮಾವಯ್ಯಾ, ಪಾತ್ರೆಯಲ್ಲಿ ನೀರು ಹಾಕಿಟ್ಟರೆ ಒಂದೆರಡು ದಿನ ಇರುತ್ತೆ. ಇಡಲೆ ಮಾವಯ್ಯಾ'' ಎಂದಳು ಇಂದಿರ. ಅಷ್ಟರಲ್ಲೇ ಪಟಿಂಗ ರಾಮು, ಇಂದಿರೆಯ ತಮ್ಮ ಬಾಯಿ ಹಾಕಿದ

"ಅದಲ್ಲೇ, ಮಾವಯ್ಯ ಹೇಳಿದ್ದು, ಗಿಡದಲ್ಲೇ ಇದ್ದರೆ, ಇನ್ನೂ ಹೆಚ್ಚು ದಿನ ಬದುಕುತ್ತೆ ಹೂ ಅಲ್ವೇನು ಮಾವಯ್ಯ'' ಎಂದ.

ವಾಸುವಿನ ಕಣ್ಣಲ್ಲಿ ನೀರು ಹರಿದುಹೋಗುತ್ತಿತ್ತು. ಹೌದು ಹೂ ಗಿಡದಲ್ಲೇ ಇದ್ದರೆ, ಇನ್ನೂ ಹೆಚ್ಚು ದಿನ ಬದುಕುತ್ತೆ! ಹೂ-ಪಾತ್ರೆಯಲ್ಲಿಟ್ಟ ಕೆಂಪು ಗುಲಾಬಿ ಬೇಗ ಬಾಡುತ್ತೆ!

ತನ್ನ ಪಾಗೆ ತನ್ನ ಮಡದಿಯೇ ಆಗಿದ್ದರೆ.. ಇನ್ನೂ ಹೆಚ್ಚು ದಿನ ಬದುಕುತ್ತಿದ್ದಳೇನೋ. ವಾಸುವಿನ ನೋಟ ಶೂನ್ಯಾಕಾಶದಲ್ಲಿ ನೆಟ್ಟಿತ್ತು. ಹೃದಯ ಮಮ್ಮಲನೆ ಮರುಗುತ್ತಿತ್ತು. ಕಣ್ಣಿಂದ ನೀರು ತೊಟ್ಟಿಕ್ಕುತ್ತಿತ್ತು...

---

## ಬೇವು-ಬೆಲ್ಲ ‡ ‡ ‡ ‡ ‡

### ೧

"ಅದ್ಯಾಕೆ ಸಾವಿತ್ರೀಬಾಯಿ, ಆ ಮಗೂನ ಹಾಗೆ ಹೊಡೆಯುತ್ತಿದ್ದೀರಿ ?" ಎಂದು ಪಕ್ಕದ ಮನೆ ವೆಂಕಮ್ಮನವರು, ಏಳು ವರ್ಷದ ಕೃಷ್ಣನನ್ನು ಹಿಂದು ಮುಂದೆ ನೋಡದೆ ಹೊಡೆಯುತ್ತಿದ್ದ ಸಾವಿತ್ರಿಯನ್ನು ಪ್ರಶ್ನಿಸಿದರು.

"ನಿಮಗೇಕೆ ಅದೆಲ್ಲಾ ? ಅವನು ಮನೆಯಲ್ಲಿ ಮಾಡುವ ಕಾವಳಿ ನೀವು ಕಂಡಿದ್ದೀರೇನು ?" ಎಂದು ಸಿಡಿಗುಟ್ಟುತ್ತಲೇ ಉತ್ತರವಿತ್ತಳು ಸಾವಿತ್ರಿ.

"ಅದೇನಮ್ಮ! ಅಷ್ಟು ತಂಟೆ ಮಾಡಿದ ಮಾತ್ರಕ್ಕೆ ಕಣ್ಣು ಮೂಗು ನೋಡದೆ ಹಾಗ ಹೊಡೆಯುವುದೇ? ಹಣ್ಣಿಗ ಸ್ವಲ್ಪ ನಿಧಾನ ಇರಬೇಕು ಸಾವಿತ್ರೀಬಾಯಿ! ಹಾಗ ಹೊಡೆದರೆ ಎಲ್ಲಾದರೂ ಉಸಿರು ಕಟ್ಟಿಕೊಂಡೀತು! ಇದೇನನ್ಯಾಯವಮ್ಮಾ! ಹೀಗೆಲ್ಲಾದರೂ ಉಂಟೇ?"

'ಸಾಕು ವೆಂಕಮ್ಮನವರೆ ನಿಮ್ಮ ಒವಣ! ಇತರರ ಸಂಸಾರದ ಸುದ್ದೀಗ ಬರೋದು ನೀವು ಬಹಳ ದೊಡ್ಡ ಮನುಷ್ಯರು!"

"ಏನೋಮ್ಮ! ನಿಮ್ಮ ಹತ್ತಿರ ನನಗಾಗ ಬೇಕಾದುದೇನು? ಏನೊ, ನಾನೂ ಮೂವತ್ತು ವರ್ಷದಿಂದ, ನಿಮ್ಮವರನ್ನೆಲ್ಲಾ ಬಲ್ಲವಳು ಶ್ರೀನಿವಾಸ, ನಮ್ಮ ರಾಮೂನೊಟ್ಟಿಗೆ ಬೆಳೆದೋನು! ಅವನೊಂದಲ್ಲ, ನಮ್ಮ ರಾಮು ಒಂದಲ್ಲ. ಮದುವೆ ಮುಂಜಿ ಎಲ್ಲಾ ಒಟ್ಟಿಗೇ ನಡೀತಲೇ ಬಂತು! ಶ್ರೀನಿವಾಸನ ಅದೃಷ್ಟ ಹೀಗಾಗಬೇಕೆ? ಈ ಸುಖಕ್ಕೆ ಈ ಮಗೂನ ಬಿಟ್ಟು ಕಣ್ಮುಚ್ಚಿದಳು, ಪುಣ್ಯಾತ್ಗಿತ್ತಿ ಪದ್ಮಮ್ಮ "

"ಸರಿ, ಸರಿ, ಜಾಸ್ತಿಯಾಯಿತು, ನಿಮ್ಮ ಸಲಿಗೆ, ಮಾತುಮಾತಿಗೆ ಆ ಸವತಿ ಹೆಸರು, ಬೆಳಗಾದರೆ ರಾತ್ರಿತನಕ " ಎಂದು ಕೃಷ್ಣನ ಬದಿಗೆ ತಿರುಗಿ, ಅಳುತ್ತಿದ್ದ ಅವನನ್ನು ರಟ್ಟೆ ಹಿಡಿದು, ದರದರನೆ ಒಳಕ್ಕೆ ಎಳೆದುಕೊಂಡು "ಮುಚ್ಚು ಬಾಯಿ ಸಾಕಿನ್ನು ನಿನ್ನ ಅವಾಂತರ! ನಿನ್ನಿಂದ ಊರಿನೋರಿಂದೆಲ್ಲಾ ನನಗೆ ಮಾತುಗಳು " ಎಂದು ಗಟ್ಟಿಯಾಗಿ ಕೂಗುತ್ತಲೇ ಇದ್ದಳು ಸಾವಿತ್ರೀಬಾಯಿ.

ತೊಟ್ಟಿಲಲ್ಲಿ ಸದ್ದು ಮಾಡುತ್ತಿದ್ದ ಲಲ್ಲೂ, ಸಾವಿತ್ರಿಯ ಒಂದು ವರ್ಷದ ಮಗಳು, ಈ ರಂಪಿನಲ್ಲಿ ಎದ್ದು ಚೀರಿದಳು. ಮೊದಲೇ ಉರಿಯುತ್ತಿದ್ದ ಸಾವಿತ್ರಿಗೆ ಇನ್ನಷ್ಟು ಸಿಟ್ಟು ಹೆಚ್ಚಾಯಿತು. ತೊಟ್ಟಿಲಿನ ಹಗ್ಗವನ್ನು ಜಗ್ಗುತ್ತಾ "ಹಾಳಾಗು ಶನೀ! ನೀನೊಬ್ಬಳು ಹುಟ್ಟಿದ್ದೀ, ನನ್ನ ಪ್ರಾಣಕ್ಕೆ" ಎಂದು ತಡಬಡಯಿಲ್ಲದೆ ಕೂಗುತ್ತಲೇ ಇದ್ದಳು. ಈ ರಗಳೆಯನ್ನೆಲ್ಲಾ ನೋಡುತ್ತ ಇನ್ನೂ ಅಲ್ಲೇ ನಿಂತಿದ್ದ ಮುದಿ ಮುತ್ತೈದೆ ವೆಂಕಮ್ಮನವರು "ನಾನು ಹೋಗಿ ಬರ್ತೀನಮ್ಮಾ ಸಾವಿತ್ರೀ ಬಾಯಿ" ಎಂದರು.

"ಹೊರಡಬಹುದು" ಎಂದು "ಇವರನ್ನು ಬಾ ಎಂದವರು ಯಾರು?" ಎಂದು ಗೊಣಗುಟ್ಟುತ್ತಲೇ ಅಕೆಯ ಹಿಂದೆಯೇ 'ಧಡಾ' ರೆಂದು ಬಾಗಿಲು ಹಾಕಿದಳು.

"ಪದ್ಮ ಇದ್ದಾಗ ಒಂದೂ ದಿನ ಹೀಗೆ ಕಳುಹುತ್ತಿರಲಿಲ್ಲವಮ್ಮ!" ಎಂದು ಮೆಲುದನಿಯಲ್ಲಿ ತನ್ನಲ್ಲೇ ತಾನು ಹೇಳಿಕೊಳ್ಳುತ್ತಾ ತನ್ನ ಮನೆಯಲ್ಲಿ ಕಾಲಿಟ್ಟರು ವೆಂಕಮ್ಮನವರು.

ಅಲ್ಲೇ ವರಾಂಡದಲ್ಲೇ ಕೂತು ಸ್ವೆಟರ್ ಹಾಕುತ್ತಿದ್ದ ಅವರ ಸೊಸೆ ಶ್ಯಾಮಲೆ, "ಏನತ್ತೆ, ಏನೋ ಹೇಳಿಕೊಂಡೇ ಬರುತ್ತಿದ್ದೀರಿ? ಪಕ್ಕದ ಮನೆ ಕಥೆಯೇ?" ಎಂದಳು.

"ಅದಲ್ಲ ನೋಡು ಶ್ಯಾಮಲೆ, ಆ ಮಗುವನ್ನು ಹಿಡಿದು ಕಣ್ಣು ಮೂಗು ನೋಡದೇ ಹೇಗೆ ಹೊಡೀತಿದ್ದಳು! ಏನೊ ಮೂವತ್ತು ವರ್ಷದ ಹಳೆಯ ಸ್ನೇಹಾಂತ ಹೋದೆ. ಅವಳಿಗಿನ್ನೂ ಸಿಟ್ಟು ಹೆಚ್ಚಾಯಿತು! ಹೋಗಿಬರುತ್ತೇನಮ್ಮಾಂದರೆ, ಶನಿ ತೊಲಗಿದರೆ ಸಾಕೂಂತ ದಡಾರ್ ಎಂತ ಬಾಗಿಲ ಹಾಕೋದೇನೆ? ಪದ್ಮ ಇದ್ದಾಗ, 'ದೊಡ್ಡ ಮುತ್ತೈದೆ ನೀವು ವೆಂಕಮ್ಮನೋರೆ, ನನ್ನ ಸೌಭಾಗ್ಯವನ್ನು ಹರಸಬೇಕೆಂ'ದು, ಮಗುವಿಗೆ ಹಾಲುಣ್ಣಿಸುತ್ತಿರಲಿ, ಬಂದು ಕೈಯಾರೆ ಕುಂಕುಮ ಇಡೋಳು! ಅವಳಿಗೆ, ಇವಳಿಗೆ, ಎಲ್ಲಿ ಸಾಮ್ಯ? ಚಿನ್ನದಂತಹ ಸಂಸಾರ ಬಿಟ್ಟು ಹೋದಳು ಪಾಪ, ಶ್ರೀನಿವಾಸ ಇವಳೊಡನೆ ಅದು ಹೇಗಾದರೂ ಇದ್ದಾನೊ! ಸಿಹಿ ನುಂಗಿದ ಬಾಯಿಗೆ ಕಹಿ ಇಟ್ಟಂತೆ!"

"ಹೂಂ, ಅದೇ ನೋಡಿ ಅತ್ತೆ! ಶ್ರೀನಿವಾಸರಾಯರು ಈಗ ಮನೇ

ಕಡೆ ನೋಡುವುದೇ ಇಲ್ಲ. ಬೆಳಿಗ್ಗೆ ಊಟಮಾಡಿಕೊಂಡು ಹೋದ ಮಾರಾಯ, ರಾತ್ರೀನೆ ತಾನೆ ಮನೆ ಸೇರುವುದು! ಪದ್ಮ ಇದ್ದಾಗ ಹಾಗಿರುತ್ತಿದ್ದರೆ? ಕಾಲೇಜು ಬಿಡುವುದು ತಡ, ಮನೆ ಕಡೇನೆ ಕಾಲು! ಆದರೂ ಅವರ ಮುಖ ನೋಡಿ ಈಗ ಅತ್ತೆ, ಎಷ್ಟು ಕಳೆಗುಂದಿ, ನಿರುತ್ಸಾಹವಾಗಿ ಕಾಣುತ್ತೆ. ಹೇಗಿದ್ದರು ಪಾಪ!"

"ಅಷ್ಟೇ ಶ್ಯಾಮಲೆ, ಗಂಡು ಹೆಣ್ಣಿನ ಜೋಡು ನೆಟ್ಟಗಿದ್ದರೇನೇ ಎಲ್ಲ ಚೆನ್ನ. ನನಗಿನ್ನೂ ಪದ್ಮನ್ನ ಕರೆದುಕೊಂಡು, ನನಗ ನಮಸ್ಕಾರ ಮಾಡಿದ್ದು, ಅವನು ಬಂದ ದಿನ ಕಣ್ಣಿಗೆ ಕಟ್ಟಿದ ಹಾಗಿದೆ. ಹೇಗಿದ್ದರು ದಂಪತಿಗಳು? ರತಿ-ಮನ್ಮಥರಂತೆ! ಅವಳು ಇದ್ದಿದ್ದರೆ, ಇನ್ನೂ ಒಂದೆರಡು ಮಕ್ಕಳಾಗಿರೋದು ಈ ವೇಳಗೆ!"

"ಸರಿ ಮಕ್ಕಳಿಗೇನು ಕಡಿಮೆ! ಈಕೆಗೂ ಆಗಿದೆ, ಇಲ್ಲವೆ? ಆದರೆ ಆ ಸುಖ ಆ ಸಂತೋಷ, ಆ ಗೆಲುವು ಎಲ್ಲಿ ಬಂದೀತು? ನನಗ ಪದ್ಮ ಎಲ್ಲ ಹೇಳ್ತಾ ಇದ್ದಳು, ಬಹಳ ಒಪ್ಪಿದ ದಾಂಪತ್ಯ ಅವರದು. ಅಂದ ಚೆಂದ, ಊಡು-ಜೋಡು, ಎಲ್ಲಾ ಹೇಗ ಹೊಂದಿತ್ತು!"

"ಹೌದಮ್ಮಾ, ಅದಕ್ಕಂತಲೇ ಕಣ್ಣುಬಿಟ್ಟಿದಳು. ಎಲ್ಲಾ ನೆಟ್ಟಗಿರಲೇ ಬಾರದು ನ್ನ ಸಂಸಾರದಲ್ಲಿ. ವಿಧಿ ಯಾವುದಾದರೊಂದು ಸೂಜ್ಞನ್ನ ತಂದು ಹಾಕೇ ಹಾಕುತ್ತೆ. ರಾಮೂ ಬರೋ ಹೊತ್ತಾಯಿತಲ್ಲವೆ ಶ್ಯಾಮಾ? ಒಲೆ ಹಚ್ಚಿಸಲಿ ಕಾಫೀಗೆ?" ಎಂದು ವಂಕಮ್ಮನವರು ಒಳಕ್ಕೆ ಹೊರಟರು.

"ಹೂಂ, ಒಂದೆ ಅತ್ತೆ ಈ ಸ್ವೆಟರ್ ಸ್ವಲ್ಪ ಇದೆ ಮುಗಿಸಿಬಿಟ್ಟು ನಾನೂ ಬರುತ್ತೇನೆ" ಎಂದಳು ಶ್ಯಾಮಲೆ.

೨

ಶ್ರೀನಿವಾಸನು ತಕ್ಕಮಟ್ಟಿಗ ವಸತಿಯುಳ್ಳದ್ದ ಗೃಹಸ್ಥ. ಆಮಲ್ದಾರೀ ಕೆಲಸ ಮಾಡಿ ಇದ್ದ ಒಬ್ಬನೇ ಮಗನಿಗೆ ಸಾಕಷ್ಟು ಆಸ್ತಿಯನ್ನು ಗಳಿಸಿದ್ದರು ಅವನ ತಂದೆ. ಇವನ ತಾಯಿ ಅವನಿನ್ನೂ ಮೂರು ನಾಲು ವರ್ಷದ ಮಗುವಾಗಿದ್ದಾಗಲೇ ತೀರಿ ಹೋಗಿದ್ದರು. ಅಂತೇ ತಾಯಿ-ತಂದೆ, ಎರಡೂ ತಾನೇ ಆಗಿ ಅತಿ ಪ್ರೀತಿಯಿಂದ ಬೆಳೆಸಿದ್ದರು ಅವರ ತಂದೆ. ಮಧ್ಯಂಪ್ರತಿ ಗೃಹಸ್ಥರ ಮಗನಾದರೂ ಸಾಕೆನ್ನುವಷ್ಟು ಸಂಪತ್ತು. ಒಳ್ಳೆಯ ರೂಪವಂತ. ಸಂಗೀತ, ಸಾಹಿತ್ಯದಲ್ಲಿ ಅಭಿರುಚಿಯುಳ್ಳವ.

ಓದುವಾಗ, ತನ್ನ ಕಾಲೇಜಿನ ಡ್ರೆಮ್ಯಾಟಿಕ್ ಅಸೋಸಿಯೇಷನ್‌ದ ಕಾರ್ಯದರ್ಶಿತ್ವದಲ್ಲಿ ತನ್ನ ರಸಿಕತ್ವವನ್ನೆಲ್ಲಾ ಹೊರಹಾಕಿದ್ದ ಎಂ. ಎಸ್‌ಸಿ ಪಾಸಾಗಿ, ಬೆಂಗಳೂರಿನಲ್ಲೇ ಕಾಲೇಜಿನಲ್ಲಿ ಲೆಕ್ಚರರ್ ಆಗಿದ್ದ

ಸಾವಿತ್ರಿ, ಶ್ರೀನಿವಾಸನಿಗೆ ಎರಡನೇ ಹೆಂಡತಿ. ಅವನ ಮೆಚ್ಚಿನ ಮಡದಿ ಪದ್ಮ ಅವನನ್ನೂ ಅವರೀರ್ವರ ಪ್ರೀತಿ ಪ್ರತೀಕವಾದ ಕೃಷ್ಣನನ್ನೂ ಬಿಟ್ಟು ಹೋಗಿ ನಾಲ್ಕೈದು ವರ್ಷಗಳಾಗುತ್ತ ಬಂತು ಅವಳು ಹೋದ ನಂತರ, ಅವನಿಗೆ ದೇಹದಲ್ಲಿಯ ಒಂದು ಭಾಗವೇ ಕಳಚಿದಂತಾಗಿ, ಅವನ ಜೀವನ ತೀರ ಯಾಂತ್ರಿಕವಾಗಿ, ನಿಸ್ಸಾರವಾಗಿ ನಡೆಯುತ್ತಿತ್ತು

ರಾತ್ರಿ ಒಂಬತ್ತು ಗಂಟೆ ಮೇಲಾಗಿತ್ತು ಶ್ರೀನಿವಾಸನು ಆಗ ತಾನೆ ಮನೆಗೆ ಬಂದಿದ್ದನು. ಆ ವೇಳೆಗಾಗಲೆ ಒಂದು ನಿದ್ದೆ ಮಾಡಿದ್ದ ಸಾವಿತ್ರಿ ಅವನು ಬಂದುದನ್ನು ನೋಡಿ ಎದ್ದು ಬಂದಳು ನಿದ್ದೆಯಲ್ಲಿ ಎಳೆದುಕೊಂಡು ಹೋಗುತ್ತಿದ್ದ ಅವಳ ಕಣ್ಣುಗಳೂ, ಕೆದರಿ ಎಲ್ಲು ಓಡಾಡುತ್ತಿದ್ದ ಕೂದಲೂ, ಹಣೆಯುಗಲವೂ ಚದುರಿದ ಕುಂಕುಮ, ಈರ್ಷೆ, ಕೋಪಗಳನ್ನು ಸೂಸುತ್ತಿದ್ದ ಅವಳ ಮುಖಭಾವ, ಆಗ ತಾನೆ ಹೊರಗಿನಿಂದ ಬಂದ ಶ್ರೀನಿವಾಸನಿಗೆ ಸ್ವಲ್ಪ ಜಿಗುಪ್ಸೆಯನ್ನು ಹುಟ್ಟಿಸಿತು.

"ಮಲಗಿದ್ದೆಯಾ ಸಾವಿತ್ರಿ ?" ನಿರುತ್ಸಾಹಿತನಾಗಿ ಎಂದ ಶ್ರೀನಿವಾಸ, ಮೆಲುದನಿಯಲ್ಲಿ

"ಇನ್ನೇನು, ಮಲಗದೆ ? ಅರ್ಧರಾತ್ರಿಯವರೆವಿಗೆ ಎದ್ದು ಕೂತಿರಲಾಗುತ್ತೇನು ? ನನ್ನ ಕೈಲಂತೂ ಆಗದು.."

"ಉಹೂಂ, ಹಾಗೆಂದಲ್ಲ ಸುಮ್ಮನೆ ಕೇಳಿದೆ ಹೌದು, ಹೊತ್ತಾಯಿತು ತುಂಬಾ ಊಟ ಆಯ್ತೆ?" ಎಂದು ಬೇರೆ ಪ್ರಶ್ನೆ ಕೇಳಿದ.

"ಸರಿ, ಸರಿ ಇನ್ನು ಊಟ ಮಾಡಿದರಾಯ್ತು ಈಗಾಗಲೇ ನನ್ನ ಗೈಯ್ಯಾಳಿಯೆಂದೂ, ಕುರೂಪಿಯೆಂದೂ ಒಂದೊಂದಲ್ಲ, ಅಕ್ಕಪಕ್ಕದ ಮನೆಯವರು ಆಡುವುದು. ಇನ್ನು ನೀವು ಬರುವ ಮುಂಚೆ, ಊಟ ಅಷ್ಟು ಮಾಡಿ ಕೂತರಂತೂ ಸರಿ!" ಎಂದು ಗುಡುಗಿದಳು.

"ಹಾಗೆಲ್ಲಾ ಯಾರನ್ನುತ್ತಾರೆ ಸಾವಿತ್ರಿ? ಏನೆಲ್ಲಾ ಸುಮ್ಮನೆ ಆತ್ಮನಿಂದನೆ ?"

"ಮತ್ತಿನ್ನೇನು ? ನಾನೇನು ಆಕೆ ಹಾಗೆ ಚೆಲುವೆಯೇ ? ಓದು

ಬರಹ ಬರುತ್ತದೆಯೆ? 'ಹಳ್ಳೀ ಹುಡುಗಿ! ಏನು ಬರುತ್ತದೆ ಎಂದು, ಈ ಪಟ್ಟಣ ವಾಸದಲ್ಲಿ ನಿಭಾಯಿಸಲಿ?' "

ಸಾವಿತ್ರಿಯ ಘೋರಣೆ ತಡೆಬಡೆಯದೆ, ಮುಂದೆ ಸಾಗುತ್ತಲೇ ಇತ್ತು. ಶ್ರೀನಿವಾಸನಿಗೆ ಏನೂ ತೋರಲಿಲ್ಲ. ಆಗ "ಸುಬ್ಬಪ್ಪನಿಗೆ ಎಲೆ ಹಾಕಲಿಕ್ಕೆ ಹೇಳು ಸಾವಿತ್ರಿ, ಊಟ ಮಾಡೋಣ" ಎಂದು ಶ್ರೀನಿವಾಸ ಜಾರಬೇಕೆಂದ

" ಅವನೆಲ್ಲಿದ್ದಾನೆ ಮನೇಲಿ? ಎಲ್ಲಾ ಹಳೇ ಹೆಗ್ಗಣಗಳು ನನ್ನ ನೋಡಿದರೇನೇ ಒಂದಿಷ್ಟೂ ತಾಳಿಕೆಯಿಲ್ಲ ಮಾತೆತ್ತಿದರೆ 'ಆ ತಾಯಿ ಇದ್ದಾಗ'....ಎಂದು ತುರುಮುರುಮಾಡುತ್ತಾನೆ! ನನಗೂ ಕೇಳಿ, ಕೇಳಿ ಸಾಕಾಗಿ ಹೋಗಿದೆ. ಬೆಳಿಗ್ಗೆ ಬರುತ್ತೇನೆಂದು ಹೇಳಿ ಅಡಿಗೆ ಮಾಡಿಟ್ಟು ಎಲ್ಲಿಗೆ ಹೋದನೋ! ಹೇಳೋರು ಕೇಳೋರು ಇದ್ದರೆ ತಾನೆ ಈ ಮನೇಲಿ? "

" ಹೋಗಲಿ ಬಿಡು, ಅಪ್ಪನ ಕಾಲದಿಂದ ಇರುವವರು ಅವರು. ಒಂದಿಷ್ಟು ಸಲಿಗೆಯಲ್ಲಿ ಮಾತಾಡಿದರೆ ಮಾತ್ರ ಏನು? ಎಲೆ ಹಾಕು, ಈಗ ಬರುತ್ತೇನೆ "ಎಂದು ಎಷ್ಟೋ ಸಮಾಧಾನದಿಂದಲೇ ಹೇಳಿದನು. ಸಾವಿತ್ರಿಯು ಮುಖ ತೀರ ಕೋಪದಿಂದ ಉಗ್ರರೂಪ ತಾಳಿತ್ತು

ಶ್ರೀನಿವಾಸ ಅತಿ ನಿಧಾನಸ್ಥ ಹೆಚ್ಚಾದ ಸಹನೆ ಸಮಾಧಾನ ತಾಳ್ಮೆ ಅವನ ಹುಟ್ಟುಗುಣಗಳಾಗಿದ್ದವು ಕೈಕಾಲು ತೊಳೆದುಕೊಂಡು ಊಟದ ಮನೆಗೆ ಹೋಗುವ ಮುಂಚೆ, ಅಲ್ಲೇ ಪಡಸಾಲೆಯಲ್ಲಿ ಮಲಗಿದ್ದ ಕೃಷ್ಣನ ಹಾಸಿಗೆಯ ಸೇರಿ ಹೋಗಿ ಅವನ ಬಳಿ ಕುಳಿತನು. ನಿದ್ದೆಯಲ್ಲೇ ನಗುತ್ತಿದ್ದ ಅವನ ಮುದ್ದು ಮುಖ ಪದ್ಮಳ ನೆನಪು ತರುತ್ತಿತ್ತು ಕೃಷ್ಣ ಚೆಲುವಿನಲ್ಲಿ ತನ್ನ ತಾಯಿಯನ್ನೇ ಹೋಲುತ್ತಿದ್ದನು ಆ ತುಂಬು ಕೆನ್ನೆ, ದಟ್ಟವಾದ ಗುಂಗುರು ಕೂದಲು, ಆ ತಿಳಿ ನಗು, ಎಲ್ಲಾ ಪದ್ಮಳನ್ನೇ ನೆನಪು ಮಾಡುತ್ತಿದ್ದವು ಆ ನೆನಪಿನಲ್ಲೇ ಶ್ರೀನಿವಾಸನು, ಮೆಲ್ಲನೆ ಅವನ ಕೂದಲನ್ನು ಸವರುತ್ತಾ, ಹೊದಿಕೆಯನ್ನು ಸರಿಮಾಡಿ ಅವನನ್ನೇ ದಿಟ್ಟಿಸಿ ನೋಡುತ್ತಾ ಕುಳಿತನು.

ಎಲೆ ಹಾಕಿ. ಊಟದ ಮನೆಯ ಬಾಗಿಲಲ್ಲಿ ನಿಂತು ಇದನ್ನೆಲ್ಲಾ ನೋಡುತ್ತಿದ್ದ ಸಾವಿತ್ರಿ ಧಡಧಡನೆ ಬಂದು ತೊಟ್ಟಿಲಿನಲ್ಲಿ ನಿದ್ದೆ

ಮಾಡುತ್ತಿದ್ದ ತನ್ನ ಮಗು ಲಲ್ಲೂನ, ಒರಟುತನದಿಂದ, ಒಂದು ರಟ್ಟೆ ಹಿಡಿದು ಕೃಷ್ಣನ ಬದಿಗೆ ತಂದು ಮಲಗಿಸುವ ಭರದಲ್ಲಿ ಮಗು ಆ ನೋವಿನಲ್ಲಿ ಚೀರಿತು ಇದನ್ನು ನೋಡಿ ಎಲ್ಲವನ್ನೂ ಗ್ರಹಿಸಿದ ಶ್ರೀನಿವಾಸ ಎದ್ದು ಬಂದು ಮಗುವನ್ನು ತಟ್ಟುತ್ತಾ "ಹಾಗೇಕ ಸಾವಿತ್ರಿ, ಮಲಗಿದ ಮಗುವನ್ನು ಎಬ್ಬಿಸುವಿ ಏಕೆ?" ಎಂದನು

ಮಗುವನ್ನು ತಟ್ಟುತ್ತಿದ್ದ ಅವನ ಕೈಯ್ಯನ್ನು ಎತ್ತಿ ಬದಿಗೊಗೆದು "ಅವಳನ್ನೇಕೆ ಮುಟ್ಟುತ್ತೀರಿ? ಎಲ್ಲೊ ತನಿಮಗು! ಏಕೆ ಹುಟ್ಟಿತೋ? ಯಾರಿಗೆ ಬೇಕಾಗಿತ್ತು!' ಎಂದು ಕೂಸಿನ ಗಲ್ಲ ಚಿವುಟಿದಳು.

"ಸಾವಿತ್ರಿ, ಏನರಿಯದ ಆ ಹಸುಗೂಸನ್ನು ಏನೆಲ್ಲಾ ಅನ್ನುತ್ತೀಯಲ್ಲ? ಬಾ, ಅನ್ನ ಬಡಿಸು." ಎಂದು ಶ್ರೀನಿವಾಸ ಎದ್ದು ಬಂದು ಎಲೆ ಮುಂದೆ ಕೂತನು

"ಕಪ್ಪುನೋರೇದು! ಅವಳೇನು ಚೆಲುವೆಯೆ? ಎಲ್ಲ ಚೆಲುವೂ ಮುದ್ದೆಯಾಗಿದ್ದಾನಲ್ಲ, ನಿಮ್ಮ ಕೃಷ್ಣಮೂರ್ತಿ!" ಎಂದಳು ಅಕ್ಕಸದಿಂದ ಅನ್ನ ಬಡಿಸುತ್ತಾ ಸಾವಿತ್ರಿ.

ಶ್ರೀನಿವಾಸನು ಸಮಾಧಾನದಿಂದಲೇ ಊಟಮಾಡುತ್ತಿದ್ದ ಸಾವಿತ್ರಿಯ ಬಡಬಡ,ಒಟಒಟ ಒಂದೇಸವನೆ ಮುಂದುವರಿಯುತ್ತಲೇ ಇತ್ತು "ನಾನೂ ನೋಡುತ್ತಲೇ ಇದ್ದೇನೆ ಅವನು ನಿಮಗೆ ಮುದ್ದು, ಊರಿನವರಿಗೆಲ್ಲಾ ಮುದ್ದು! ನಾನೂ ಅವಳೂ ತಾನೇ ಬೇಡವಾಯ್ತು "

ಇನ್ನು ಶ್ರೀನಿವಾಸನಿಗೆ ತಡೆಯಲು ಆಗಲಿಲ್ಲ. "ಸುಮ್ಮನೆ ಯಾಕೆ ಏನೆಲ್ಲ ಹೇಳುತ್ತೀ ಸಾವಿತ್ರಿ! ಕೃಷ್ಣ ಹೇಗೋ, ನನಗೆ ಲಲ್ಲೂನೂ ಹಾಗೇ ಅಲ್ಲವೆ? ಇಲ್ಲಸ್ಸಲ್ಲೆಲ್ಲಾ ಯೋಚಿಸಿ ಹೀಗೆ ಮನಸ್ಸಿಗೆ ಬೇಸರ ಪಡವೆ, ಇದ್ದುದರಲ್ಲಿ ಸಂತೋಷವಾಗಿರಬಾರದೇಕೆ?" ಎಂದನು

"ಹೌದೌದು ಈ ಬಿನ್ನಾಣದ ಮಾತಿಗೇನು? ನಾಟಕದಲ್ಲಿ ಪಾರ್ಟು ಮಾಡುವವರ ಹಾಗೆ! ಹಳ್ಳಿಯ ಮುಕ್ಕ ನಾನು! ಪಟ್ಟಣವಾಸದ ಈ ಬಿನ್ನಾಣ ಹೇಗೆ ತಿಳಿಯಬೇಕು ಬಿಡಿ"

"ಮಜ್ಜಿಗೆ ಒಡಿಸು ಸಾವಿತ್ರಿ. ಇನ್ನೂ ಓದುವುದಿದೆ." ಎಂದು ಬೇಗ ಬೇಗ ಊಟ ಮಾಡಿ ಎದ್ದು ಹೋದ ಶ್ರೀನಿವಾಸ.

* * * *

ಮನೆಗೆ ಬಂದರೆ ನಾಕು, ಶ್ರೀನಿವಾಸನ ಮನೆಯಲ್ಲಿಯ ಬಾಳು ಹೀಗೆಯೇ ನಡೆಯುತ್ತಿತ್ತು. ಅಂತೇ ಎಲ್ಲೆಲ್ಲೋ ಸ್ನೇಹಿತರೊಡನೆ ಅಲೆದು ಬರುತ್ತಿದ್ದನು

ಪದ್ಮಳಿದ್ದಾಗ ಮನೆಗೆ ಬಂದೇನೇ ಎಂಬ ಆತುರದಿಂದ ಬರುತ್ತಿದ್ದ ಆಳಿಂದ, ಆಳಿಗೆ ಎಷ್ಟು ಅಂತರ!

ಪದ್ಮಳೊಡನೆ ಅವನ ಬಾಳು ಹಾಲು ಸಕ್ಕರೆ ಕಲೆತಂತಿತ್ತು "ಪದ್ಮಾ.... ಪದ್ಮಾ... .. ಎಲ್ಲಿ ಹೋದೆಯೋ ಪದ್ಮಾ?" ಎಂದು ಶ್ರೀನಿವಾಸನ ಹೃದಯ ಪದ್ಮಳಿಗಾಗಿ ಹುಡುಕುತ್ತಲೇ ಇತ್ತು. ಮೊರೆಯಿಡುತ್ತಲೇ ಇತ್ತು. ಕೊರಗುತ್ತಲೇ ಇತ್ತು. ಪದ್ಮಳಿಲ್ಲದ ಇಂದಿನ ತನ್ನ ಬಾಳು ತಂತಿ ಕತ್ತರಿಸಿದ ವೀಣೆಯಂತೆ ಎನಿಸಿತ್ತು. ಅಂದು ಪದ್ಮಳೊಂದಿಗೆ ತಾನನುಭವಿಸಿದ ಬಾಳು, ಅವರ ಸವಿ ನೆನಪುಗಳು ಇಂದು ಅವಳಿಲ್ಲದ ತನ್ನ ಜೀವನದ ದಾರಿಗೆ ಬೆಳಕಾಗಿ ಸಾಕೆ? ಇನ್ನೆಷ್ಟು ದೂರ ಸಾಗಬೇಕಾಗಿದೆಯೋ? ಅಷ್ಟು ದೂರಕ್ಕೂ ಸಾಕಷ್ಟು ಬೆಳಕು ಕೊಟ್ಟಿರುವಳೇ ?

ಪದ್ಮಳೊಡನೆ ಇದ್ದ ಅವನ ಬಾಳು, ನಿಮಿಷಗಳು ಕಳೆದಂತೆ ಕಳೆದಿತ್ತು ಅವಳು, ಅವನ ರಸಿಕ ಜೀವನಕ್ಕೆ ಉದ್ದೀಪಕಳಾಗಿದ್ದಳು ದಿನದಿನವೂ ನೂತನೋತ್ಸಾಹದಲ್ಲಿ ಹೊಸಬೆಳಕನ್ನು ತೋರುತ್ತಿದ್ದಳು ತಾಯಿಯಂತೆ ಜತೆಗಾತಿಯಂತೆ, ಹೆಂಡತಿಯಂತೆ. ಎಲ್ಲ ಸುಖವನೂ ಉಣಿಸಿದ್ದಳು. ಸೌಂದರ್ಯೋಪಾಸಿಯಾಗಿದ್ದ ಶ್ರೀನಿವಾಸನಿಗೆ ತನ್ನ ಆತ್ಮ ಗುಣ, ಮನಸ್ಸು, ಮತ್ತು ದೇಹದ ಚೆಲುವಿನಿಂದ ತಣಿಸುತ್ತಿದ್ದಳು ಹೊರಗಿನಿಂದ ಬರುವ ವೇಳೆಗೆ, ಚೆಲುವೆಯಾಗಿ ನಸುನಗುತ್ತಾ ಅವನಿಗೆ ಎದುರಾಗುತ್ತಿದ್ದಳು ಅವನು ಬರುತ್ತಲೇ ಅವನ ಕೋಟನ್ನು ತಾನೇ ಕಳಚಬೇಕು. ಎಂದಾದರೂ ಸ್ವಲ್ಪ ಹೊತ್ತಾದ ದಿನ "ಅದೇನು? ಈ ದಿನ ಪದ್ಮಳ ನೆನಪು ಬರಲಿಲ್ಲವೇ? ಸೂರ್ಯನಿಲ್ಲದೆ ಪದ್ಮ ಮುಗುಚಿಕೊಂಡಿರುತ್ತದೆ ಎನ್ನುವುದನ್ನು ಮರೆತಿರೇನು?" ಎಂದು ಅವನ ಷರ್ಟಿನ ಗುಂಡಿಯ ಮೇಲೆ ಕೈಯಾಡಿಸುತ್ತಾ ಮೃದುವಾಗಿ ಕೇಳುತ್ತಿದ್ದಳು

ಈ ನೆನಪುಗಳೇ ಪದ್ಮಳು ಅವನಿಗಾಗಿ ಕಟ್ಟಿಟ್ಟು ಹೋದ ಬುತ್ತಿ.

ಆಗಿನ್ನೂ ಪದ್ಮಳು ಸಂಸಾರಕ್ಕೆ ಬಂದ ಹೊಸದು ಕಾಲೇಜಿನಿಂದ

ಬಂದು, ಸುತ್ತಾಡಿ ಬರಲು ಹೋಗಹೋಗಡೋಣವೆಂದು, ಸಾಧಾರಣ ಪಂಚೆಯನ್ನುಟ್ಟು, ಸಿಲ್ಕಿನ ಜುಬ್ಬವನ್ನು ಹಾಕಿ, ಪದ್ಮಳಿಗೆಂದು ಕಾದಿದ್ದ ಪದ್ಮ ತಯಾರಾಗಿ, ಮೆಲ್ಲಗೆ ಹಿಂದಿನಿಂದ ಬಂದು ಅವನ ಭುಜದ ಮೇಲೆ ಕೈ ಹಾಕಿ ತನ್ನೆಡೆಗೆ ಅವನನ್ನು ತಿರುಗಿಸುತ್ತಾ, "ಆದರೂ ಎಂತಹ ಚಲುವು ನಿಮ್ಮದು! ದೃಷ್ಟಿ ಬಿದ್ದೀತು! ಗಂಡಸರಿಗೇಕೆ ಇಷ್ಟು ರೂಪ?" ಎಂದು ಅವನ ಭುಜದ ಮೇಲೆ ತನ್ನ ತಲೆಯಿಟ್ಟಾಳು ಆ ಸಂತೋಷದ ಭರದಲ್ಲಿ ಅವಳ ಆ ತುಂಬುಗೆನ್ನೆಯನ್ನು ಹಿಂಡಿದಾಗ ಅವಳ ಮುಖವೆಲ್ಲಾ ಕೆಂಪೇರಿತ್ತು. ಹಾಗೇ ಅವಳನ್ನು ಮೆಲ್ಲಕ್ಕೆ ದೂಡುತ್ತಾ ಕನ್ನಡಿಯ ಮುಂದೆ ಅವಳನ್ನು ನಿಲ್ಲಿಸಿ ತಾನೂ ಅವಳ ಭುಜದ ಹಿಂದಿಂದ ತನ್ನ ಮುಖವೂ ಕನ್ನಡಿಯಲ್ಲಿ ಕಾಣುವ ಹಾಗೆ ನಿಂತ ಅವಳ ಕೆಂಪೇರಿದ ಕೆನ್ನೆಯನ್ನು ಸವರುತ್ತಾ "ನೋಡಾಯಿತೇ ಪದ್ಮಾ? ನೋಡು, ಈಗ ಹೇಳು, ಯಾರು ಚೆಲುವೊ?" ಎಂದನು ನಗುತ್ತಾ, ನಾಚುತ್ತಾ "ಇಬ್ಬರೂ ಹೌದು" ಎಂದು ಸಿಸ್ಮನೂತನಳಾಗಿ ಹೆಣ್ಣಿನ ಪ್ರಭೆಯನ್ನೆಲ್ಲಾ ಅವನ ಮೇಲೆ ಬೀರಿ ಮುಖವೆತ್ತಿದಾಗ ಅವನ ದೃಷ್ಟಿಗೆ ದೃಷ್ಟಿ ತಾಕಿತ್ತು......

ಮತ್ತೊಮ್ಮೆ ಒಂದು ದಿನ ಹೊರಗಿನಿಂದ ಬೇಗ ಬೇಗ ಬಂದು, "ಇಲ್ಲಿ ಬಾ ಪದ್ಮ, ನಿನ್ನನ್ನು ಶ್ವೇತವರ್ಣದಲ್ಲಿ ಅಲಂಕರಿಸಿ ನೋಡೋಣ ಎನಿಸಿದೆ" ಎಂದ. 'ಆಗಲಿ' ಎಂದು ಅಂದು ಪದ್ಮಳು ಬಿಳೀ ರೇಶ್ಮೆಯ ಸೀರೆಯನ್ನುಟ್ಟು ಬಿಳೀ ಕುಪ್ಪಸವನ್ನೇ ತೊಟ್ಟಿದ್ದಳು ತುರುಬಿನ ಸುತ್ತ ಮಲ್ಲಿಗೆಯನ್ನು ಮುಡಿದು, ಬೆಳ್ದಾವರೆಯಂತೆ, ಪವಿತ್ರತೆಯ ಮೂರ್ತಿಯಾಗಿ ಕಂಡುಬಂದಳು ಮೊದಲೇ ಚೆಲುವೆ ಅದರಲ್ಲೂ ಸಂತೃಪ್ತಜೀವನದಿಂದ ಕಳೆಗಟ್ಟಿದ್ದ ಅವಳ ತಾರುಣ್ಯ, ತಾಯ್ತನಕ್ಕೆ ಅಣಿಮಾಡಿಕೊಳ್ಳುತ್ತಿದ್ದ ಅವಳ ದೇಹ ಬಹಳ ಸೊಬಗಿನಲ್ಲಿತ್ತು ಅವಳು ತಾನು ಕರೆದೊಡನೆಯೇ ಹತ್ತಿರ ಬಂದು ನಿಂತಾಗ ಅವಳ ಸೆರಗನ್ನು ಒಂದಿಷ್ಟು ಬದಿಗೊರಗಿಸಿ ತಾನು ತಂದಿದ್ದ ಕೆಂಪಿನಡ್ಡಿಕೆಯನ್ನು ಅವಳ ಕೊರಳಲ್ಲಿ ಹಾಕಿ, ಅತ್ತಿತ್ತ ತಿರುಗಿಸಿ, ಎರಡು ಕೈಗಳಿಂದ, ಅವಳ ಮುಖವನ್ನು ಹಿಡಿದು, ಅವಳನ್ನೇ ನೋಡತೊಡಗಿದನು.

"ಅದೇನು ಹಾಗೆ ನೋಡುತ್ತೀರಿ? ಚಿತ್ರ ಬರೆದಾದ ನಂತರ,

ಚಿತ್ರಕಾರನು, ತನ್ನ ಚಿತ್ರ ನೋಡುವಂತೆ! ತೃಪ್ತಿಯಾಯಿತೆ ನನ್ನ ಧೊರೆ?'' ಎಂದು ಅವನ ಕೆನ್ನೆಯನ್ನು ಮೃದುವಾಗಿ ಸವರಿದಳು

" ಹೂಂ ಪದ್ಮ, ಮಲ್ಲಿಗೆಯ ಮಧ್ಯೆ, ಕಂಪು ಗುಲಾಬಿ ಇಟ್ಟ ಹಾಗಿದೆ, ನಿನ್ನ ಆ ಬಿಳೀ ಕೊರಳಲ್ಲಿ ಕೆಂಪು! ನೀನು ನನ್ನ ಸೌಭಾಗ್ಯಲಕ್ಷ್ಮಿ ಕಾಣೆ!'' ಎಂದು ಅವಳ ಸೆರಗನ್ನು ಸರಿಯಾಗಿ ಹೊದಿಸಿದನು.

ಆಗ ಪದ್ಮಳ ಕಣ್ಣಲ್ಲಿ ನೀರೂರಿತ್ತು

''ನೀವೇಕೆ ಹೀಗೆ? ಈ ಒಡವೆ ಇಲ್ಲದಿದ್ದರೇನು? ನನಗೆ ಇವೆಲ್ಲ ಬೇಕೆನಿಸುವುದಿಲ್ಲ. ನಿಮ್ಮ ಪ್ರೀತಿ ಸಾಲದೆ?''

" ಹಾಗಲ್ಲ, ಈಗಂದೆಯಲ್ಲವೆ, ಚಿತ್ರಕಾರನ ಹಾಗೆಂದು ಅವನು ಬರೆಯುವ ಚಿತ್ರ, ಅದು ಅವನಿಗೆ ತನ್ನ ಪಾಲಿನ ದೈವ ಅದರ ಅಲಂಕಾರ ನೊಬಗೇ ಅವನ ತೃಪ್ತಿ ಹಾಗೇ ನನಗೂ ಪದ್ಮಾ''

''ಬನ್ನಿ ಹೋಗೋಣ. ಆ ನಿಮ್ಮ ಭಾವನೆ ಹೀಗೇ ಇದ್ದರೆ ಮಂಟಪದಲ್ಲಿ ಕೂಡಿಸಿ ದೇವತೆ ಅಂದೀರಿ! ಸುಮ್ಮಗೆ ಕೂತು ಪೂಜೆ ಮಾಡಿಸಿಕೊಳ್ಳಲು ನನಗಿಷ್ಟವಿಲ್ಲ ಮತ್ತೆ'' ಎಂದಳು ನಗುತ್ತಾ

''ಮತ್ತೆ ಏನಾದರೆ ಇಷ್ಟ ನಿನಗೆ?'' ಎಂದ ಶ್ರೀನಿವಾಸ.

''ನಿಮ್ಮ ನಿರಂತರ ಸೇವೆ'' ಎಂದು ಅವಳು ತನ್ನ ಮುಖವನ್ನೇ ದಿಟ್ಟಿಸಿ ನೋಡಿದಾಗ, ಅವಳ ನೋಟದಲ್ಲಿ, ಅವಳ ಮುಖಭಾವದಲ್ಲಿ, ಅತೀತವಾದ ತೃಪ್ತಿ, ಮತ್ತು ಹೆಣ್ಣಿನಲ್ಲಿಯ ಮಹದ್ಗುಣಗಳೆಲ್ಲವನ್ನೂ ಆ ಮುಖ ಪ್ರತಿಬಿಂಬಿಸುತ್ತಿತ್ತು ಅವಳ ಆ ಪವಿತ್ರತೆಗೆ ಶ್ರೀನಿವಾಸನೂ ಒಮ್ಮೊಮ್ಮೆ ನಡುಗುತ್ತಿದ್ದ

ಈ ನೆನಪುಗಳಲ್ಲಿ ಕಣ್ಣು ಒದ್ದೆಯಾಗಲು, ಹಾಗೇ ಮಲಗಿದ್ದ. ಸಾವಿತ್ರಿ ಇನ್ನೂ ಗೊಣಗುತ್ತಲೇ ಕೆಲಸ ಮಾಡಿಕೊಳ್ಳುತ್ತಿದ್ದಳು ಎದ್ದು ಹೋಗಿ, ಅಡಿಗೆಮನೆಯಲ್ಲಿದ್ದ ಸಾವಿತ್ರಿಯನ್ನು "ಇನ್ನು ಮಲಗು ಸಾವಿತ್ರಿ ಬೆಳಿಗ್ಗೆ ಸುಬ್ಬಪ್ಪ ಒಂದು ಮಾಡುತ್ತಾನೆ'' ಎಂದ ಶ್ರೀನಿವಾಸ.

''ನನಗೆ ಕಸಮುಸುರೆ ಕೆಲಸ ಅಭ್ಯಾಸ ತಾನೆ? ಈ ಕೈಗಳೇನೂ ತಂಬೂರಿ ಮೀಟುವ ಕೈಗಳಲ್ಲ'' ಎಂದುಸುರಿದಳು

''ಎಂದೂ ಏಕೆ ಹಾಗೆ ಆತ್ಮನಿಂದೆ ಸಾವಿತ್ರಿ? ಮಾಡಲು ಆಳಿದ್ದಾಗ, ನೀನೇಕೆ ಮಾಡಬೇಕೆಂದೆ ಅಷ್ಟೆ!'' ಎಂದು ಶ್ರೀನಿವಾಸನು ತನ್ನ ಕೋಣೆಗೆ ಹೋಗಿ ಮಲಗಿದನು.

ಸಾವಿತ್ರಿಯೊಂದಿಗೆ ಹೊಂದಿಕೊಂಡು, ಅನುಕೂಲವಾಗಿರಬೇಕೆಂಬ ಶ್ರೀನಿವಾಸನ ಎಲ್ಲ ಪ್ರಯತ್ನಗಳೂ ನಿಷ್ಫಲವಾಗಿದವು. ಮೊದಲು ಮೊದಲು, ಪದ್ಮಳೊಂದಿಗೆ ತಾನಿದ್ದಂತೆಯೇ ಇರಬೇಕೆಂದು ಪ್ರಯತ್ನಿಸುತ್ತಿದ್ದ. ಸಾಧ್ಯವಾಗಲಿಲ್ಲ. ತಾನು ಕಾಲೇಜಿನಿಂದ ಬರುವಾಗ, ಹೂ ತಂದು, ತಾನೇ ಅವಳ ತುರುಬಿನಲ್ಲಿಡಲು ಹೋಗಲು, ಮುಖ ಗಂಟು ಹಾಕಿಕೊಂಡು "ಇಲ್ಲಿ ಕೈಗೆ ಕೊಡಿ‌ಂದ್ರೆ! ಇದೆಲ್ಲಾ ನನಗೆ ಅಭ್ಯಾಸವಿಲ್ಲ" ಎಂದು ಅವನ ಕೈಯಿಂದ ತೆಗೆದುಕೊಳ್ಳುವ ರೀತಿಯಲ್ಲಿ, ಹೂವಲ್ಲ ತರಟಿ, ಕೆಳಗೆ ಬೀಳುತ್ತಿತ್ತು. ಶ್ರೀನಿವಾಸನ ಮನಸ್ಸು ಸಣ್ಣಗಾಗುತ್ತಿತ್ತು. ಎಂದಾದರೂ, ತಾನಾಗಿದ್ದು ಸೀರೆಯನ್ನುಟ್ಟು ಹೊರಗೆ ಬಾ ಎಂದಾಗ "ಇದೇನು ಅನ್ಯಾಯ, ಕುಲೀನರ ಹೆಣ್ಣು ನೊಗನು ಮಾಡಿಕೊಂಡು ಬಜಾರಿಯಂತೆ ಪೇಟೆಯಲ್ಲಿ ತಿರುಗುವುದೇ?" ಎಂದು ಅವನ ಉತ್ಸಾಹಕ್ಕೆ ನೀರೆರಚುತ್ತಿದ್ದಳು. ಯಾವಾಗಲೂ ಏನೋ ನಿಷ್ಠುರ, ಅತೃಪ್ತಿ. ದಿನಬಳಗೂ ಗೋಣಗಾಟ. ಶ್ರೀನಿವಾಸನು ತನ್ನ ಪ್ರಯತ್ನದಲ್ಲಿ ಆಶಾಭಂಗಿತನಾಗಿ, ಇತ್ತೀಚೆಗೆ, ಅವಳ ಮಾತಿಗೇ ಹೋಗುತ್ತಿರಲಿಲ್ಲ.

*          *          *          *          *

ಪದ್ಮ ಹೋದ ವರ್ಷವದು. ಶ್ರೀನಿವಾನ ಹುಚ್ಚನಂತಿದ್ದ. ಕೃಷ್ಣ ಇನ್ನೂ ಎರಡು ವರ್ಷದ ಮಗು. ಮನೆಯಲ್ಲಿ ತಂದೆಯ ಕಾಲದಿಂದ ಬಂದ ಅಡಿಗೆ ಸುಬ್ಬಪ್ಪ ಮತ್ತು ತಾನು, ಇಬ್ಬರೇ. ತನ್ನನ್ನು ತೀರ ಎಳೆಯ ವಯಸ್ಸಿನಿಂದಲೂ ಬಲ್ಲ ಪಕ್ಕದ ಮನೆಯ ವೆಂಕಮ್ಮನವರೂ ಅವರ ಮಗ ರಾಮೂ, ಆ ಸಮಯದಲ್ಲಿ ತನಗೆ ಸಹಾಯಕರಾಗಿದ್ದರು. ಹಾಗಿದ್ದೂ, ಮನೆಯಲ್ಲಿದ್ದ ಸಣ್ಣ ಮಗುವಾದ ಕೃಷ್ಣನನ್ನು ಗುರುತಿಸುವವರು ಯಾರಿಲ್ಲದೇ ಆಗಿತ್ತು. ತನ್ನವರೆಂದು ತನಗಾರೂ ಇರಲಿಲ್ಲ. ಎಂದೋ ಸತ್ತ ತಾಯಿಯನ್ನೂ, ತನ್ನನ್ನು ನಿಸ್ಸಹಾಯಕನನ್ನಾಗಿ ಮಾಡಿ ಹೋಗಿದ್ದ ಪದ್ಮಳನ್ನೂ ನೆನೆನೆನೆದು ಸಣ್ಣ ಮಗುವಿನಂತೆ ಅಳುತ್ತಿದ್ದ. ಮಗುವಿನ ಹಿತಕ್ಕಾದರೂ, ಮತ್ತೆ ಅವನು ಮದುವೆಯಾಗಲೇಬೇಕೆಂದು ಹೇಳುತ್ತಿದ್ದ ಅವನ ಹಿತೈಷಿಗಳ ಮಾತು ಯುಕ್ತವೆಂದು ತೋರುತ್ತಿತ್ತು. ಅವನಿಗೆ ತನ್ನ ಸುಖಕ್ಕಾಗಿ ಮತ್ತೆ ಮದುವೆ ಬೇಕಾಗಿರಲಿಲ್ಲ. ಪದ್ಮಳಂತಹ ಹೆಣ್ಣು, ಅಂತಹ ಮಧುರಭಾಂಧವ್ಯ ಮತ್ತು ಅದರ ಸವಿ, ತನಗಿನ್ನು

ದೊರೆಯಲಾರದು ಹೂ ಅರಳುವುದು ಒಂದೇ ಬಾರಿ. ತನ್ನ ಬಾಳ ಕುಸುಮ, ಪದ್ಮಳೊಂದಿಗೇನೇ ಮಣ್ಣು ಸೇರಿತ್ತು. ತನ್ನೆಲ್ಲ ಸುಖಕ್ಕೂ ಅವಳೊಂದಿಗೇನೇ ತಿಲಾಂಜಲಿಯಿತ್ತಿದ್ದ. ತನ್ನ ಮತ್ತು ಅವಳ ಮಿಲನ, ಕವಿ ಮತ್ತು ಕಾವ್ಯಕಾಂತೆಯರ ದಿವ್ಯ ಮಿಲನದಂತಿತ್ತು. ಮತ್ತ ಅಂತಹ ಅನುಪಮಳಾದ ಹೆಣ್ಣು ತನಗೆ ಸಿಗಲಾರಳು. ಪದ್ಮಳ ಜೀವ, ತನ್ನ ನಾಳನಾಳಕ್ಕೂ ಹೊಂದಿತ್ತು. ಪದ್ಮಳೊಂದಿಗೇನೆ ತನ್ನ ಬಾಳಿನಲ್ಲಿಯ ಉತ್ಸಾಹವೆಲ್ಲವೂ ನಶಿಸಿತ್ತು...ಹಾಗಿದ್ದರೂ, ಅವಳ ಮತ್ತು ತನ್ನ ಪ್ರೀತಿಪ್ರತೀಕವಾದ, ಹಸುಗೂಸಾದ ಕೃಷ್ಣನಿಗೆ ತಾಯೊಬ್ಬಳು ಬೇಕಾಗಿತ್ತು. ಅಂತೇ, ಅವನು ಬೇರೊಬ್ಬ ಹೆಣ್ಣನ್ನು ಮದುವೆಯಾಗಲೇ ಬೇಕಿತ್ತು.

ಇದುವರೆಗೆಂದೂ ಮುಖವನ್ನೇ ತೋರಿಸದ, ಅವನ ಸೋದರ ಮಾವ ನಾರಾಯಣರಾಯರು, ಅಂದು ಎಲ್ಲಿಲ್ಲದ ದಯಾಪ್ರೀತಿಗಳನ್ನು ತೋರಿಸುತ್ತ ಅವನಲ್ಲಿಗ ಬಂದಿದ್ದರು, ತನ್ನ ತಂಗಿಯನ್ನು ನೆನೆದು, ಇಂದಿನ ಅವನ ನಿಸ್ಸಹಾಯಕತೆಯನ್ನು ನೆನೆದು ಕಣ್ಣೀರಿಟ್ಟಿದ್ದರು.

ಅಮಲ್ದಾರೀ ಕಲಸದಲ್ಲಿ ಶ್ರೀನಿವಾಸನ ತಂದೆಯ ಸ್ವಭಾವಕ್ಕೂ ಹಳ್ಳಿಯಲ್ಲಿದ್ದು ವ್ಯವಸಾಯನಿರತರಾಗಿದ್ದ ಅವರ ಭಾವ ಮೈದುನ ನಾರಾಯಣರಾಯರ ಸ್ವಭಾವಕ್ಕೂ, ಹೊಂದದೆ ಅವರಿಬ್ಬರಲ್ಲಿ ಅನ್ಯೋನ್ಯತ ಇರಲಿಲ್ಲ ಅಂತೇ ಅವರು ಇವರು ಅಪರೂಪವಾಗೇ ಇದ್ದರು ಇಂದು ಒಬ್ಬಂಟಿಗನಾದ ಶ್ರೀನಿವಾಸನಿಗೆ ಬಳೆದು ನಿಂತಿದ್ದ ತನ್ನ ಮಗಳನ್ನು ಕೊಟ್ಟು ಮತ್ತೆ ಅವನನ್ನು ಗೃಹಸ್ಥನನ್ನಾಗಿ ಮಾಡುವ ಮಣ್ಣ ಕಟ್ಟಿಕೊಳ್ಳಲು ಬಂದಿದ್ದರು

'ಪಸೂರೀಪ್ಪ, ನೋಡು! ಹಳ್ಳೀಹುಡುಗಿ ಈ ಕಾಲದಂತೆ ಹೆಚ್ಚಿನ ಓದು, ಸಂಗೀತ ಹಾಡು ಇಲ್ಲ ಆದರೇನು? ಮನಗ ಗೃಹಿಣಿಯಾಗಿ, ನಿನ್ನ ಮಗನಿಗೆ ತಾಯಾಗಿ ಇರುತ್ತಾಳೆ ಕಲೆತ ಬಾಂಧವ್ಯ ಬಿಟ್ಟು ಬಿಡಬೇಡ ಹೆಣ್ಣನ್ನು ನೋಡಬೇಕೆಂದಿದ್ದರ ಇಂದೇ ಬಾ ಹೊರಡೋಣ'' ಎಂದರು.

"ಬೇಕಿಲ್ಲ ಮಾವ ನನ್ನ ಸುಖಕ್ಕಾಗಿ ನನಗೆ ಮದುವೆ ಬೇಕಿಲ್ಲ. ಕೃಷ್ಣನೊಬ್ಬನು ಇಲ್ಲದಿದ್ದರೆ ನಾನು ಎಲ್ಲಾದರೂ ದೇಶಾಂತರ ಹೋಗುತ್ತಿದ್ದೆ'' ಎಂದಿದ್ದ ಶ್ರೀನಿವಾಸ.

"ಹಾಗೆಂದರೆ ಹೇಗೆ ಶ್ರೀನಿವಾಸ? ಒಳ್ಳೇ ಕುಲವಂತರ ಮನೆತನ ನಿಮ್ಮದು. ಹಾಗಾಗಿ, ದೇಶಾಂತರ ಹೋಗುವದೆಂದರೇನು? ನಮ್ಮ ಸಾವಿತ್ರಿಯೇನೂ ತೆಗೆದು ಹಾಕುವ ಹೆಣ್ಣಲ್ಲ ಒಂದು ಸ್ವಲ್ಪು ಶ್ಯಾಮಲ ಬಣ್ಣ. ಆದರೇನು ಹೇಳು? ಸಂಸಾರ **ಮಾಡಿಕೊಂಡಿರೋ** ಹೆಣ್ಣು ಹೇಗಿದ್ದರೇನು? ಚೆಲುವೇನು ಬರೀ ಹೊರ ಹೊದಿಕೆ" ಎಂದಿದ್ದರು.

"ಮಾಡಿಕೊ ಶ್ರೀನಿವಾಸ. ಕಲಿತ ರಕ್ತ. ನಿನ್ನ ಮಗುವನ್ನು ಸರಿಯಾಗಿ ನೋಡ್ತಾಳು" ಎಂದು ತನ್ನ ಸ್ನೇಹಿತರು ಹೇಳಿದ್ದರು 'ಹೂಂ" ಎಂದಿದ್ದ ಶ್ರೀನಿವಾಸ, ಸಂದರ್ಭಗಳ ಅವಾಂತರದಲ್ಲಿ ದಿಕ್ಕು ತೋರದೆ.

ಹಾಗೇ ಆಗಿತ್ತು ಸಾವಿತ್ರಿಯೊಂದಿಗೆ ಅವನ ಮದುವೆ ರೂಪವಿಲ್ಲದಿದ್ದರೇನು? ಗುಣವಿದ್ದೀತು ಎಂದು, ತಾಳಿ ಕಟ್ಟಿದಾಗ, ಸಮಾಧಾನ ತಾಳಿದ್ದ. ಕ್ರಮೇಣ, ಗುಣವೂ ಶೂನ್ಯವೆಂದು ಅರಿವಾದಾಗ ತನ್ನ ಮತ್ತು ಕೃಷ್ಣನ ದುರದೃಷ್ಟಕ್ಕೆ ಮರೆಯಲ್ಲೇ ಕಣ್ಣೀರು ಹಾಕುತಿದ್ದ ಕಲೆ, ಸಂತೋಷ, ಸೌಂದರ್ಯ ಮತ್ತು ಸುಖಗಳಿಂದ ತುಂಬಿದ್ದ, ಪದ್ಮನೊಡನೆಯ ಅವನ ಬಾಳು ಅವಳಿಲ್ಲದೆ, ಒಡೆದ ಮುತ್ತಾಗಿತ್ತು. ಇಂದು ಈ ಗೋಣಗಾಟದ ಸಿಡುಮೊಗದ ಸಾವಿತ್ರಿಯೊಂದಿಗೆ ಅವನ ಬಾಳು. ಒಡೆದ ಮಡಿಕೆಯೇ ಆಗಿತ್ತು ಹಿರಿಯರ ಪಂಕ್ತಿಯಲ್ಲಿ ಕೂತು, ಬಾಯಲ್ಲಿಟ್ಟ ತುತ್ತನ್ನು ಉಗಿಯಬೇಕೆಂದಿದ್ದರೂ, ಮರ್ಯಾದೆಯ ಲಕ್ಷಣವಲ್ಲವೆಂದು ನುಂಗಿದಂತೆ, ತನ್ನ ಬಾಳ ಕಹಿಯನ್ನು ನುಂಗಿದ್ದನು. ಆದರ್ಶವಾದಿ ಶ್ರೀನಿವಾಸನು, ಒಮ್ಮೊಮ್ಮೆ ಸಾವಿತ್ರಿಯ ನಡುವಳಿಕೆಗೆ ಮರುಕಪಡುತ್ತಿದ್ದನು ತನಗೂ ಸುಖವಿಲ್ಲ, ಇತರರಿಗೂ ಸುಖವಿಲ್ಲ! ಅವಳ ಬಾಳಾದರೂ ಎಂತಹ ಬಾಳು! ಅಜ್ಞಾನದಲ್ಲಿಯೇ ಮುಚ್ಚಿಕೊಂಡಿದ್ದ ಅವಳನ್ನು ಒಂದಿಷ್ಟು ಹೊರತೆಗೆಯೋಣ ವೆಂದರೆ, ಅದಕ್ಕೆ ಅವಳು ಅವಕಾಶವನ್ನೆ ಕೊಡುತ್ತಿರಲಿಲ್ಲ ಅಜ್ಞಾನ, ಮತ್ಸರಗಳೊಂದಿಗೆ, ಜಂಡಿತನವೂ ಸೇರಿದ ಹೆಣ್ಣುಗಳ ಪಾಡೇ ಅಷ್ಟು! ಏನು ಮಾಡಲೂ ತೋರದೆ ಎಲ್ಲವನ್ನೂ ಸಹಿಸಿ ಕಾಲವನ್ನು ತಳ್ಳುತ್ತಿದ್ದ ಶ್ರೀನಿವಾಸ, ಪಾಪ!

೩

ಅಂದು ಯುಗಾದಿ. ಊರಲ್ಲೆಲ್ಲಾ ಹಬ್ಬದ ಸಡಗರ. ಎಲ್ಲರ ಮನೆಗಳು, ಮಾವಿನೆಲೆಯ ತೋರಣ, ಚಿತ್ರವಿಚಿತ್ರದ ರಂಗವಲ್ಲಿಗಳಿಂದ ತುಂಬಿ ಹಬ್ಬದ ಕಳೆಯಿಂದ ಶೋಭಿಸುತ್ತಿದ್ದವು.

ಶ್ರೀನಿವಾಸನಿಗೆ ಅಂದು ರಜ ಮನೆಯೆಲ್ಲಾ ಹಬ್ಬದ ಸಡಗರದಲ್ಲಿತ್ತು. ಇಂದೇಕೋ ಸಾವಿತ್ರಿ ಸ್ವಲ್ಪ ಸಮಾಧಾನದಿಂದಲೇ ಇದ್ದಳು. ಹಬ್ಬಕ್ಕೆಂದು ಅವಳ ತಾಯಿಯೂ ಸಹ ಬಂದಿದ್ದರು ಶ್ರೀನಿವಾಸನು ಅವರಿಬ್ಬರಿಗೆಂದು, ಹಬ್ಬದ ಉಡುಗರೆಯಾಗಿ, ಜರೀ ಅಂಚಿನ ಧರ್ಮಾವರದ ಸೀರೆಗಳನ್ನು ತಂದಿದ್ದನು ಅಂತೇ ಸಾವಿತ್ರಿ, ಅತಿ ತೃಪ್ತಿಯಿಂದ. ಅಡಿಗೆಮನೆಯಲ್ಲಿ ತಾಯಿಯೊಡನೆ ಹರಟುತ್ತಾ, ಹಬ್ಬದ ಹೋಳಿಗೆ ತಟ್ಟುತ್ತಿದ್ದಳು. ಲಲ್ಲೂ ಮಲಗಿದ್ದಳು. ಆಗ ತಾನೇ ನೀರೆರೆದುಕೊಂಡು ಬಂದಿದ್ದ ಕೃಷ್ಣನಿಗೆ, ಶ್ರೀನಿವಾಸನು ಮೈಯೊರಸಿ ಹೊಸ ಬಟ್ಟೆಗಳನ್ನು ತೊಡಿಸುತ್ತಿದ್ದ. ಅಷ್ಟರಲ್ಲಿ ಅನಾದಿಕಾಲದಿಂದ ಅವರ ಮನೆಯಲ್ಲಿ ದೇವತಾರ್ಚನೆ ಮಾಡುತ್ತಿದ್ದ ಶಂಕರಭಟ್ಟರು ಬಂದರು

"ಏನಪ್ಪಾ ಶ್ರೀನಿವಾಸ, ಹೊಸ ವರ್ಷ 'ಸರ್ವೇ ಜನಾಃ, ಸುಖಿನೋ ಭವಂತು'" ಎಂದರು.

"ನಮಸ್ಕಾರ ಭಟ್ಟರೇ, ಬನ್ನಿ; ವರ್ಷಗಳು ಹೇಗೆ ಕಳೆದು ಹೋಗುತ್ತಿವೆ ನೋಡಿ?" ಎಂದ ಶ್ರೀನಿವಾಸ ಮಗನಿಗೆ ತಲೆಬಾಚುತ್ತಾ

"ಹೊ, ಕಾಲಕ್ಕೇನು ಬಿಡು, ಕಳೆದು ಹೋಗುತ್ತೆ ಆಗುವ ಬದಲಾವಣೆಯನ್ನು ಯಾವುದನ್ನೂ ತಪ್ಪಿಸಲಾರೆವು ಮಗನಿಗೆ ಬಟ್ಟೆ ತೊಡಿಸುತ್ತಿದ್ದೀ! ಎಲ್ಲಾ ಆ ತಾಯೀ ಸ್ವರೂಪದ ಅಚ್ಚು, ನಿನ್ನ ಮಗ ಶ್ರೀನಿವಾಸ. ಅಂತಹ ಗುಣಗಳ ಗಣಿ ನಮಗೆಲ್ಲಿ ದಕ್ಕ್ಯಾಳು! ಆಗಲೇ ಐದಾರು ವರ್ಷಗಳಾಯಿತಲ್ಲವೆ ಆಕೆ ಕಣ್ಮುಚ್ಚಿ?"

"ಹೂಂ ಭಟ್ಟರೆ, ಪೂಜೆಗೆ ಎಲ್ಲಾ ಸಿದ್ಧವಾಗಿರುವ ಹಾಗಿದೆ ಪ್ರಾರಂಭಿಸುತ್ತೀರೇನು?" ಎಂದು ನಯವಾಗಿ, ಅವರ ಧೋರಣೆಯನ್ನುನಿಲ್ಲಿಸಿದ. ಭಟ್ಟರು ಪಂಚೆಯ ಕಚ್ಚೆಯನ್ನು ಸರಿಪಡಿಸಿಕೊಳ್ಳುತ್ತಾ "ಸಾವಿತ್ರೀಬಾಯಿ, ಪೂಜೆಗೆ ಎಲ್ಲಾ ಸಿದ್ಧವೇನಮ್ಮಾ?" ಎಂದು ದೇವರ ಮನೆಯ ಒಳಹೊಕ್ಕರು.

ಶ್ರೀನಿವಾಸನು, ಕೃಷ್ಣನನ್ನು ಮುತ್ತಿಟ್ಟು "ಆಡಿಕೊ ಹೋಗು ಕೃಷ್ಣಾ" ಎಂದು ಅವನನ್ನು ಕಳುಹಿ ತಾನಲ್ಲೇ ಆರಾಮಕುರ್ಚಿಯಲ್ಲಿ ಕೂತನು.

ಪದ್ಮಳಿದ್ದಾಗ, ಇದೇ ಯುಗಾದಿಗಳನ್ನು ಇಬ್ಬರೂ ಅದೆಷ್ಟು

ಉತ್ಸಾಹದಿಂದ ಉಚ್ಚರಿಸುತ್ತಿದ್ದರು! ತನ್ನ ಆ ದಿನದ ತೈಲಾಭ್ಯಂಗಕ್ಕಾಗಿ ನಮ್ಮಳ 'ಪದ ವೃಡಿ' ಹೇಳುತ್ತಿದ್ದಳು. ದೊಡ್ಡ ಜಲಕ್ರೀಡೆಯೇ ಆಗುತ್ತಿತ್ತು. ಒಂದೆರಡು ಗಂಟೆಗಳ ಕಾಲ ಸ್ನಾನದ ಸಂಭ್ರಮವೇ ಆಗಿ ಹೋಗುತ್ತಿತ್ತು. ಪೂಜೆಗೆಂದು ಬಂದ ಶಂಕರಭಟ್ಟರು ನಗುತ್ತಲೇ ಕಾಯುತ್ತಿದ್ದರು. ಶಂಕರಭಟ್ಟರು ಪೂಜೆಯಾದನಂತರ, ಬೇವು-ಬೆಲ್ಲ ಕೊಡಲು ಬಂದಾಗಲೆಲ್ಲಾ "ಭಟ್ಟರೆ, ನಮ್ಮವರಿಗೆ ಬಾಳಿನಲ್ಲೂ ಸಿಹಿಯೇ ಹೆಚ್ಚು ಪ್ರೀತಿ! ಹಾಗೆಂದು ಅವರಿಗೆ ಬೆಲ್ಲವೇ ಹೆಚ್ಚಾಗಿ ಕೊಡಿ. ಬೇವು ಸ್ವಲ್ಪವಾಗಿ ಸೇರಿಸಿ" ಎಂದು ತನ್ನನ್ನು ನೋಡಿ ನಗಯಾಡುತ್ತಿದ್ದಳು.

. ಇಂದು . ಅದೇ ಯುಗಾದಿ ... ಅದೇ ಶಂಕರಭಟ್ಟರು .... ಆದರೆಷ್ಟು ವ್ಯತ್ಯಾಸ! ಪದ್ಮಳೊಬ್ಬಳ ಜೀವನದ ಮೇಲೆ ತನ್ನ ಸರ್ವಸ್ವವೂ ಆಧಾರವಾಗಿತ್ತು! ...

. ಪದ್ಮಾ! ಎಲ್ಲಿ ಹೋದೆ ನನ್ನ ಬಿಟ್ಟು ಪದ್ಮಾ ?

ನೆನಪುಗಳ .. ಪದ್ಮಳೊಂದಿಗಿನ ಸಹಬಾಳಿನ ನೆನಪುಗಳು ಅವನ ಪಯಣದ ಹಾದಿಗೆಂದು ಅವಳಿತ್ತ ಬುತ್ತಿ. ಬಾಳಿನ ಬಿಸಿಲಿನ ತೀವ್ರ ಇರಿತದಲ್ಲಿ ತಂಗಲೆಂದು ಅವಳಿತ್ತ ಹೆಂದ ನೆನಪುಗಳು !

ಹತ್ತು ವರ್ಷಗಳ ಹಿಂದೆ

ತಾನು ಯಾರೋ? ಪದ್ಮ ಯಾರೋ? ಎಲ್ಲೋ ಹರಿಯುತ್ತಿದ್ದ ತಿ- ಪ್ರವಾಹ, ತನ್ನಲ್ಲಿ ಕಲೆತಳ, ತನ್ನ ಜೀವನವನ್ನು ತುಂಬಿಸಿ. ಐದು ವರ್ಷಗಳ ಕಾಲ ಸ್ವರ್ಗದ ಮೆಟ್ಟಿನಲ್ಲಿರಿಸಿ ಮತ್ತೆ ಕಣ್ಮರೆಯಾದಳು

ಹತ್ತು ವರ್ಷಗಳ ಹಿಂದೆ ...

ತಾನಿನ್ನೂ ಓದುತ್ತಲೇ ಇದ್ದ. ತನ್ನ ತಂದೆ ಆಗ ತಾನೆ ಕೆಲಸದಿಂದ ನಿವೃತ್ತರಾಗಿದ್ದರು. ಅಂದು ಕಾಲೇಜಿನ ಸೋಷಲ್ಸ್(Socials)ನಲ್ಲಿ ಎಲ್ಲರೂ ಅವನ 'ಹ್ಯಾಮ್ಲೆಟ್' ಪಾತ್ರದ ಅಭಿನಯಕ್ಕೆ ಅಭಿನಂದಿಸಿದ್ದರು. ಹೃದಯ ಉತ್ಸಾಹದಿಂದ ತುಂಬಿತ್ತು. ಮನೆಗೆ ಬರುವ ವೇಳೆಗೆ ರಾತ್ರಿ ಹತ್ತು ಗಂಟೆಯಾಗಿ ಹೋಗಿತ್ತು. ಆದರೂ ಅವನ ತಂದೆ ಅವನಿಗಾಗಿ ಇನ್ನೂ ಕಾದು ಕುಳಿತಿದ್ದರು.

"ಏಕಪ್ಪಾ ನೀವಿನ್ನೂ ಎದ್ದೇ ಇದ್ದೀರಿ? ಸ್ವಲ್ಪ 'ಲೇಟ್' ಆಯಿತಪ್ಪಾ. ಈ ದಿನ ನಮ್ಮ ಕಾಲೇಜಿನ ಸೋಷಲ್ಸ್ ಇತ್ತು" ಎಂದು ಅತಿ ವಿನಯದಿಂದ ತಂದೆಯಲ್ಲಿ ಹೇಳಿದ.

“ಪರವಾ ಇಲ್ಲ ನೋಡು ಶ್ರೀನಿವಾಸ, ನಾಳೆ ಹೇಗೂ ರಜವಲ್ಲವೆ? ನಿನ್ನೊಡನೆ ಒಂದು ಪ್ರಯಾಣಕ್ಕೆಂದು ಒಪ್ಪಿಕೊಂಡಿದ್ದೇನೆ” ಎಂದರು ಶ್ರೀನಿವಾಸನ ತಂದೆ.

“ಎಲ್ಲಿಗಪ್ಪ?” ಎಂದ ಶ್ರೀನಿವಾಸ, ಪ್ರಯಾಣದ ಉದ್ದೇಶವನ್ನು ಊಹಿಸುತ್ತಾ.

“ಶ್ರೀರಂಗಪಟ್ಟಣಕ್ಕೆ. ರಾಮರಾಯರು ಬಂದಿದ್ದರು. ಅವರ ಮಗಳು ಪದ್ಮ ಬಿ.ಎ. ಆಗಿದೆ. ನಾವು ಕೋಲಾರದಲ್ಲಿದ್ದಾಗ ಅವರೂ ಅಲ್ಲೇ ಇದ್ದರು. ಸಣ್ಣತನದಲ್ಲಿ ನೀನೂ ಅವಳನ್ನ ನೋಡಿರಬೇಕು?”

“ಏನೂ ನೆನಪಿಲ್ಲ.”

“ನೋಡು ಶ್ರೀನಿವಾಸ, ಹುಡುಗಿ ಗುಣವಂತಿ. ಓದುಬರಹ ಬಲ್ಲವಳು. ಸಾಂಪ್ರದಾಯದ ಹೆಣ್ಣುಮಗು. ನಾಳೆ ಹೋಗಿ ನೋಡಿಕೊಂಡು ಬರೋಣ.”

“ನೀವು ಹೋಗಿ ನೋಡಿ ಬನ್ನಿ ಅಪ್ಪಾ” ಎಂದ ಶ್ರೀನಿವಾಸ ತುಸು ನಾಚಿಕೆಯಲ್ಲಿ.

“ಇದೀಗ ಚೆನ್ನಾಯಿತು. ಮದುವೆ ಮಾಡಿಕೊಂಡು, ಆ ಹೆಣ್ಣಿನೊಂದಿಗ ಬಾಳುವವನು ನೀನು. ನಾನು ನೋಡಿ ಬರೋದಂತೆ! ಏನೋಪ್ಪ ನಿನ್ನನ್ನು ಒಬ್ಬ ಮನೆಯವನನ್ನಾಗಿ ಮಾಡಿದರೆ, ಇಲ್ಲಿಯ ನನ್ನ ಕರ್ತವ್ಯ ತೀರಿದಂತೆ” ಎಂದರು.

ಅಂತೇ ಹೊರಟಿದ್ದ, ಪದ್ಮಳನ್ನು ನೋಡಲು ಶ್ರೀನಿವಾಸ ತಂದೆಯೊಡನೆ. ಪದ್ಮಳ ತಂದೆ ರಾಮರಾಯರು ಅನುಕೂಲಸ್ಥರು. ವಿಸ್ತೃ ಶೃಂಗಾರವಲ್ಲಿನ ಸಂಸಾರ. ಚೊಕ್ಕಟವಾದ ಮನೆ. ಅಂಗಳದಲ್ಲಿ ಹೂವಿನ ತೊಟ್ಟಿಗಳು, ತೂಗುಉಯ್ಯಾಲೆ, ಇವು ಮನೆಯವರ ಗುಣವನ್ನು ತೋರುತ್ತಿದ್ದವು. ರಾಮರಾಯರು ಶ್ರೀನಿವಾಸನನ್ನೂ, ಅವನ ತಂದೆಯನ್ನೂ ಬಹಳ ಮರ್ಯಾದೆಯಿಂದ ಬರಮಾಡಿಕೊಂಡು ಸೋಫಾದ ಮೇಲೆ ಕುಳ್ಳಿರಿಸಿ ಕಾಫಿ, ತಿಂಡಿಯ ಬಗ್ಗೆ ನೋಡಲು ಒಳಕ್ಕೆ ಹೋದರು. ಶ್ರೀನಿವಾಸ ಮೈಯೆಲ್ಲಾ ಕಣ್ಣಾಗಿ, ಬಾಗಿಲ ಕಡೆ ನೋಡುತ್ತಿದ್ದ. ರಾಮರಾಯರ ಹಿಂದೆಯೇ ಬಂದಳು ಪದ್ಮ. ಎಷ್ಟು ಚೆಲುವು! ಶ್ರೀನಿವಾಸನ ಮೈಯೆಲ್ಲಾ ಪುಳಕಿತವಾಯಿತು. ತುಂಬುಗೆನ್ನೆ, ಅಗಲವಾದ ಕಣ್ಣುಗಳು, ಬೆಳದಿಂಗಳ

ಬಣ್ಣ, ನುಧ್ಯೆ ಬೈತಲೆ ತೆಗೆದುಕೊಂಡು ಇಬ್ಬದಿಯಲ್ಲೂ ಹಣೆಯ ಮೇಲೆ ನಾಚಿ ಬೀಳುತ್ತಿದ್ದ ಅವಳ ಗುಂಗುರುಕೂದಲು ಅವನನ್ನು ಪ್ರೀಮಾಕಿಸಿದ್ದವು ಕೆಂಪು ರೇಶ್ಮೆಯ ಸೀರೆಯನ್ನುಟ್ಟು ಹಳದಿ ಜಾಕೆಟ್ಟನ್ನು ತೊಟ್ಟು ಸಡಿಲವಾಗಿ ಜಡೆ ಹಾಕಿಕೊಂಡು ತಲೆತುಂಬಾ ಮಲ್ಲಿಗೆಯ ನ್ನಿಟ್ಟು ಬಳುಕುತ್ತ ಬಂದ ಪದ್ಮಳನ್ನು ನೋಡಿದಾಗ, ಸೂರ್ಯೋದಯ ವನ್ನು ಕಂಡಾಗ ಮನಸ್ಸು ಹಗುರವಾಗುವಂತೆ ಪ್ರಫುಲ್ಲವಾಯಿತು. ಶ್ರೀನಿವಾಸನ ಮನಸ್ಸು ತಾನು ಅವಳೆಡೆಗೆ ನೋಡಿದಾಗ ಅವಳ ಕಣ್ಣು ಗಳೂ ತನ್ನನ್ನೇ ಬಳಸಿದ್ದವು "ಒಪ್ಪಿಗೆಯೇ?" ಎನ್ನುವಂತಿತ್ತು ಅವಳ ಆ ಕಾಡಿಗೆಯಿಟ್ಟ ಕಣ್ಣಂಚಿನ ತಿಳಿನೋಟ

ಸ್ವಲ್ಪ ಹೊತ್ತು ಕೂತು ಮತ್ತೆ ಎದ್ದು ಹೋಗುವಾಗ, ಬಾಗಿಲಲ್ಲಿ ಒಂದು ಕ್ಷಣ ಮಾತ್ರ ನಿಂತು ತನ್ನೆಡೆಗೆ ಮತ್ತೊಮ್ಮೆ ತಿರುಗಿ ನೋಡಿದ್ದಳು. "ಬರಿದು ಮಾಡಬೇಡಿ" ಎನ್ನುವಂತಿತ್ತು ಅವಳ ಆ ದೈನ್ಯದ ನೋಟ

ಸಂಜೆ, ಶ್ರೀನಿವಾಸನು ತಂದೆಯೊಡನೆ, ದರಿಯಾ ದೌಲತ್ ಮತ್ತೆಲ್ಲ ವನ್ನೂ ಸುತ್ತಿ ಮನೆಗೆ ಬರುವ ವೇಳೆಗೆ ಮೃದುವಾದ ಧ್ವನಿಯಲ್ಲಿ ತಂಬೂರಿಯ ಶ್ರುತಿಯಲ್ಲಿ ಹಾಡುತ್ತಿದ್ದ "ಕಂಡು ಕಂಡು ನೀಯೆನ್ನ ಕೈ ಬಿಡುವರೇ ಕೃಷ್ಣ" ಎನ್ನುವ ಹಾಡು ಇಂಪಾಗಿ ಕೇಳಬರುತ್ತಿತ್ತು. ಒಳಗೆ ಬಂದು ಪಡಸಾಲೆಯಲ್ಲಿ ಬಗ್ಗಿ ನೋಡುವಲ್ಲಿ ಪದ್ಮ ತಂಬೂರಿ ಮೀಟುತ್ತ ಹಾಡುತ್ತಿದ್ದಳು ತಾನು ಹಾಗೇ ನಿಂತನು ಪದ್ಮ ಆಗ ಮೇಘ ವರ್ಣದ ಮೇಲೆ ಜರಿ ಚುಕ್ಕಿಗಳಿದ್ದ ಸೀರೆಯನ್ನುಟ್ಟಿದ್ದಳು ಅವಳ ಆ ಅರಳಿದ ಮುಖ, ದೀಪದ ಕಾಂತಿಯಲ್ಲಿ ಹೊಳೆಯುತ್ತಿದ್ದ ಅವಳ ಆ ಮೇಘವರ್ಣದ ಸೀರೆ-ಚುಕ್ಕಿಗಳು, ಮತ್ತು ಹಾಡಿನಲ್ಲೇ ಲೀನಳಾದ ಅವಳ ಮುಖದಲ್ಲಿಯ ಸುಪ್ರಸನ್ನತೆಯ ಸೌಮ್ಯಭಾವ ಮಧುರವಾದ ಇಂಪಿನ ಗಾನ, ಇವೆಲ್ಲಾ ಶ್ರೀನಿವಾಸನಿಗೆ ಮೇಘಾಚ್ಛಾದಿತ ಬೆಳದಿಂಗಳ ರಾತ್ರಿಯ ಸೌಮ್ಯಾತಾಳದ ನೆನಪು ಕೊಟ್ಟವು ಹೌದು ಪ್ರಕೃತಿ ಪ್ರೇಮಿ ಶ್ರೀನಿವಾಸ ತನ್ನ ಪ್ರೇಯಸಿ ಪದ್ಮಳಲ್ಲಿ ಒಮ್ಮೆ ಸೂರ್ಯೋದಯದ ಅರುಣ ಕಾಂತಿಯನ್ನೂ ಒಮ್ಮೆ ಸುಂದರ ಚಂದ್ರನ ಶುಭ್ರಶೀತಲ ಶಾಂತಿಯನ್ನೂ ಕಂಡು ಹಿಗ್ಗಿದ್ದನು.

ಅವಳಿನ್ನೂ ಹಾಡುತ್ತಲೇ ಇದ್ದಳು. ಹಿರಿಯರ ನೆನಪೂ ಇಲ್ಲದೆ ಶ್ರೀನಿವಾಸನು ಅವಳೆಡೆಗೇ ನಿಂತು ತನ್ಮಯನಾಗಿ ನೋಡುತ್ತಿದ್ದ. ಇದ್ದಕ್ಕಿದ್ದ ಹಾಗೆ ಹಾಡು ನಿಂತಿತು. ಪದ್ಮ ಇವನೆಡೆ ನೋಡಿ, ನಾಚಿ ಹಾಡು ನಿಲ್ಲಿಸಿದ್ದಳು. ಅವನಿಗೂ ನಾಚಿಕೆಯಾಯಿತು. ಇವರ ಚರ್ಯೆಗಳನ್ನು ಮುಗುಳ್ನಗೆಯಲ್ಲೇ ಗಮನಿಸುತ್ತಿದ್ದ ಹಿರಿಯರು ಮದುವೆಯನ್ನು ನಿಷ್ಕರ್ಷಿಸಿದರು. ಪದ್ಮಾ ಶ್ರೀನಿವಾಸರ ವಿವಾಹ ಬಹಳ ವಿಜೃಂಭಣೆಯಿಂದ ನಡೆದಿತ್ತು. ರತಿ-ಮನ್ಮಥರಂತೆ, ಪಾರ್ವತೀ-ಪರಮೇಶ್ವರರಂತೆ ಹೊಂದಿದ್ದ ಅವರ ದಾಂಪತ್ಯವನ್ನು ಹೊಗಳಿ, ಎಲ್ಲರೂ ಆಶೀರ್ವದಿಸಿದ್ದರು.

ಮದುವೆಯಾಗಿ ಊರಿಗೆ ಹೋಗುವ ದಿನ ಶ್ರೀನಿವಾಸ ಅವಳಿಗಾಗಿ ಎಲ್ಲೆಲ್ಲೂ ಹುಡುಕಿದನು. ಮನೆಯ ಹಿಂಭಾಗದಲ್ಲಿ ತೋಟದಲ್ಲಿ ಮಾವಿಮರದಡಿ ತನಗಾಗಿಯೇ ಕಾಯುತ್ತ ನಿಂತಿದ್ದಳು. ಸುತ್ತುಮುತ್ತು ನೋಡುತ್ತ ನಾಚುತ್ತಲೇ ಅವಳ ಬಳಿ ಹೋದ. ಅವಳ ಕಣ್ಣಲ್ಲಿ ತನ್ನ ಕಣ್ಣು ಕಲೆತಾಗ, ದೇಹದಲ್ಲಿ ಅದಾವುದೊ ನೂತನ ಚೇತನವುಂಟಾಗಿ ಹೃದಯವು ತುಂಬಿತ್ತು.

“ಪದ್ಮ, ‘ಕೈ ಬಿಡುವರೇ ಕೃಷ್ಣಾ’ ಎಂದು ಹಾಡಿದೆಯಲ್ಲವೆ? ನೋಡು. ಆ ಕೈಯನ್ನು ಗಟ್ಟಿಯಾಗಿ ಹಿಡಿದಿದ್ದೇನೆ. ಬಿಡುವುದಿಲ್ಲ ಒಲ್ಲಿಯಾ!” ಎಂದು ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಎಳೆಯದಾದ ಅವಳ ಬೆರಳುಗಳನ್ನು ಸವರಿದನು.

ನಾಚಿ ಕೆಂಪೇರಿದ ಪದ್ಮ ಅವನನ್ನು ಕಣ್ತುಂಬ ನೋಡಿದಳಾಗಲಿ ಬಾಯಿಂದ ಮಾತು ಹೊರಡಲಿಲ್ಲ. ಹೀಗ ಹೃದಯ ಹೃದಯದೊಡನೆ ಮಿಲನವಾಗಿ ಮಾತು ಮೂಕವಾಗಿತ್ತು.

“ಪದ್ಮಾ, ನಾನು ಹೋಗಿ ಬರಲೇ?” ಎಂದು ಶ್ರೀನಿವಾಸನು ಅವಳ ಗಲ್ಲವನ್ನೆತ್ತಲು ಆ ಅಗಲವಾದ ಕಣ್ಣುಗಳಲ್ಲಿ ನೀರು ತುಂಬಿತ್ತು. “ಆಗಲೇ ಕಣ್ಣೀರು .... !” ಎಂದು ಅವಳ ಮುಂಗುರಳನ್ನು ನೇವರಿಸಿದ.

ಪದ್ಮ ತನ್ನ ಕೈಯಲ್ಲಿ ಹಿಡಿದಿದ್ದ ಸುರಗಿ ಹೂವೊಂದನ್ನು ಅವನ ಕೈಯಲ್ಲಿಟ್ಟು, ಮೈ ಬೆವತು, ತುಟಿಯದುರುತ್ತಿರಲು “ಈ ಹೂವಿನ ಗುಣವನ್ನು ಬಲ್ಲಿರಾ?” ಎಂದಳು.

" ಊಹೂಂ ... ಹೂವಿನ ಗುಣ ಹೂವಿನ ರಾಣಿ ಪದ್ಮಳಿಗೇ ಗೊತ್ತು" ಎಂದು ನಗುತ್ತಾ ಹೇಳಿದ ಶ್ರೀನಿವಾಸ

" ಹಾಗಲ್ಲ ಹೂ ಮುಡಿದು ಅವನ್ನನುಭವಿಸುವವರಿಗೇ ಗೊತ್ತಾಗ ಬೇಕು ಆ ಗುಣ ನೋಡಿ. ಈ ಹೂ ಒಣಗಿದರೂ ಪರಿಮಳವು ತುಂಬಿ ಇರುತ್ತೆ ...ನಿಮ್ಮ ಪದ್ಮಳೂ ಹಾಗೇ "

"ಎಂತಹ ಸಾಮ್ಯ ಪದ್ಮ....!ಈಗ ತಾನೆ ಅರಳುತ್ತಿದೆ ನನ್ನ ಹೂ.... ಅದು ಒಣಗುವುದೇ ಇಲ್ಲ " ಎಂದು ಅವಳನ್ನು ಹತ್ತಿರಕ್ಕೆ ಎಳೆದನು ಒಂದೆರಡು ನಿಮಿಷ ಇಬ್ಬರೂ ತನ್ಮಯರಾಗಿ ಎಲ್ಲವನ್ನು ಮರೆತಿದ್ದರು

" ಇನ್ನು ಹೊರಟು ಬರಲೇ ಪದ್ಮ ? " ಎಂದು ಶ್ರೀನಿವಾಸ ಎದ್ದೇಳುತ್ತ ಪದ್ಮಳು ಬಾಗಿ ಶ್ರೀನಿವಾಸನ ಕಾಲುಗಳೆರಡನ್ನೂ ಮುಟ್ಟಿ, "ನಿಮ್ಮ ನಿರಂತರ ಸೇವೆ ನನ್ನ ಜೀವನದ ಗುರಿ " ಎಂದಳು ಅವಳನ್ನು ಎಬ್ಬಿಸಿ, ಅವಳ ಕೆನ್ನೆಗಳನ್ನು ಸವರಿ ಅವಳು ಮುಡಿದ ಹೂವನ್ನು ಮೂಸಿ ನೋಡಿದನು ಪದ್ಮಳು ತನ್ನ ತುರುಬಿನಿಂದ ಸಂಪಿಗೆಯೊಂದನ್ನು ಅವನಿಗೆ ಕೊಟ್ಟಾಗ ಅವಳ ಆ ರಸಿಕತ್ವಕ್ಕೆ ಶ್ರೀನಿವಾಸನು ತಲೆದೂಗಿದ್ದನು

"ನಿಮ್ಮ ಪದ್ಮಳನ್ನು ಬೇಗ ಕರೆಯಿಸಿಕೊಳ್ಳಿ " ಎಂದವಳು ಹೇಳಿ ದಾಗ ಅವಳನ್ನು ಹಾಗೇ ಅಪ್ಪಿ ಚುಂಬಿಸಬೇಕೆನ್ನಿಸಿತ್ತು ಇಷ್ಟರಲ್ಲಿ ಅವನ ತಂದೆಯು " ಶ್ರೀನಿವಾಸ, ಬಾಪ್ಪ ಹೊರಡೋಣ " ಎಂಬ ಮಾತಿನಿಂದ ನಿರ್ವಾಹವಿಲ್ಲದೆ, ಅವನಿನ್ನು ಹೊರಡಲೇಬೇಕಾಗಿತ್ತು ನೂತನ ವಧು ಪದ್ಮ ತನ್ನ ಉಷಾಪ್ರಭೆಯನ್ನು ಆಗಲೆ ಬೀರಿದ್ದಳು, ಶ್ರೀನಿವಾಸನ ಹೃದಯಾಕಾಶದಲ್ಲಿ

ಇನ್ನಷ್ಟು ನೆನೆಪುಗಳು . ಅಬ್ಬಾ .ಈ ನೆನಪೇ ತನ್ನ ಜೀವಾಧಾರ ವಾಯಿತೇ ! ಪದ್ಮಾ ? ಎಲ್ಲಿ ? ..

ಪದ್ಮ ಕೃಷ್ಣನ ಬಸಿರಿದ್ದಾಗ ಲಕ್ಷ್ಮಿಯಂತೆ ಕಂಗೊಳಿಸಿದ್ದಳು. ತಾಯ್ತನದ ಹಿರಿಮೆ ಅವಳಲ್ಲಿ ತುಂಬಿ ತುಳುಕಾಡುತ್ತಿತ್ತು. ಗಂಡನನ್ನು ಬಿಟ್ಟು ಹೆರಿಗೆಗೆ, ತೌರಿಗೆ ಹೋಗುವುದೇ ಅವಳಿಗೆ ಕಷ್ಟವಾಗಿತ್ತು.

ಆಗಿನ್ನೂ ಅವಳಿಗೆ ನಾಲ್ಕೈದು ತಿಂಗಳಾಗಿತ್ತು ಪದ್ಮ ಶ್ರೀನಿವಾಸ ರಿಬ್ಬರೂ ಗಾಳಿಗಂದು ಹೊರಗೆ ಕುಳಿತಿದ್ದರು. ಹುಣ್ಣಿಮೆ ಹೋಗಿ ನಾಲ್ಕೈದು ದಿನಗಳಾಗಿದ್ದವು. ಚಂದ್ರನು ಅರೆಮರೆಯಾಗಿ ಆಕಾಶದಲ್ಲಿ

ಏರುತ್ತಿದ್ದನು. ಪದ್ಮ ಗಂಡನ ಭುಜಕ್ಕೆ ತಲೆಯಾನಿಸಿ, ಅವನ ಕೈ ಬೆರಳು ಗಳಲ್ಲಿ ತನ್ನ ಬೆರಳುಗಳನ್ನು ಹೆಣೆದು "ನೋಡೀಂದ್ರೆ, ಸೀತಾದೇವಿಗ ಗರ್ಭಿಣಿಯಾಗಿದ್ದಾಗ ಮತ್ತೆ ಋಷ್ಯಾಶ್ರಮದಲ್ಲಿ ಇರಬೇಕೆಂಬ ಬಯಕೆ ಯಾಯಿತಂತ'' ಎಂದಳು ಮೆಲ್ಲಗೆ.

"ಓಹೋ ! ಇನ್ನು ನಾನು ರಾಮಭಾರ ಹೊರಬೇಕೇನು ? ಇರಲಿ, ಈಗ ನಮ್ಮ ದೇವಿಯ ಬಯಕ ಏನು ?'' ಎಂದ ಶ್ರೀನಿವಾಸ

"ಹೇಳಲಾ ?'' ಎಂದಳು ಪದ್ಮ ನಾಚುತ್ತಾ

"ಹೂಂ ಮತ್ತ ಏನಿದ್ದರೂ ಬಯಕ ತೀರಿಸಬೇಕಲ್ಲವೆ ?''

"ಏನಿಲ್ಲ,ನಿಮ್ಮ ತೊಡೆಯ ಮೇಲೆ ತಲೆಯಿಟ್ಟು ಮಲಗಬೇಕೆಂಬಾಸ. ಹಾಗೆ ಮಲಗಿ ನಿಮ್ಮ ಮುಖಕಾಂತಿಯನ್ನಷ್ಟು ನನ್ನಲ್ಲಿ ತುಂಬಿಕೊಳ್ಳ ಬೇಕೆಂಬ ಬಯಕೆ, ನನ್ನ ಭೂರಿ ನೀವು ಒಲ್ಲಿರಾ ನೀವಷ್ಟು ಚೆಲುವರಿದ್ದೀ ರೆಂದು ?''

"ಅದು ನಿನಗೆ ತಿಳಿಯುವ ಮಾತು ನಿನಗೆ ಅದೊಂದು ಹುಚ್ಚು ಪದ್ಮಾ ! ಅಷ್ಟ ತಾನ ನಿನ್ನ ಬಯಕ ? ಇನ್ನು ಋಷ್ಯಾಶ್ರಮವನ್ನಲ್ಲಿ ತರಲಿ ಎಂದು ಯೋಚಿಸುತ್ತಿದ್ದೆ'' ಎಂದು ನಗೆಯಾಟದಲ್ಲೇ ಅವಳ ಸಣ್ಣ ಪುಟ್ಟ ಕೋರಿಕೆಗಳನ್ನೆಲ್ಲಾ ಈಡೇರಿಸುತ್ತಿದ್ದ

ಮಗುವನ್ನು ತೆಗೆದುಕೊಂಡು ಬಂದಾಗ ಅವಳ ತಾಯ್ತನದ ಗಾಂಭೀರ್ಯಕ್ಕೆ ಬಚ್ಚಿದ್ದ ಶ್ರೀನಿವಾಸ ಅವಳಾ ಹಿರಿಮೆಯಲ್ಲಿ ತಾನು ಸಣ್ಣ ವನೆಂದೆನಿಸಿತ್ತು ಜೀವನದಲ್ಲಿಯ ಒಂದೊಂದು ಸೋಪಾನವನ್ನು ಇಬ್ಬರೂ ನಿರಾಯಾಸವಾಗಿ, ಸುಖಸಂತೋಷದಲ್ಲಿ ಹತ್ತಿ ಆನಂದದ ಶಿಖರವನ್ನೇ ಮುಟ್ಟಿದ್ದರು.

ಕೃಷ್ಣನು ಹುಟ್ಟಿದ ಎರಡು ವರ್ಷದೊಳಗಾಗಿಯೇ ಪದ್ಮ ಮತ್ತ ಗರ್ಭಿಣಿಯಾಗಿದ್ದಳು ಈ ಸಲ ಇನ್ನೂ ಲಕ್ಷಣತರವಾಗಿದ್ದಳು ಹೆರಿಗೆಗೆ ಅಲ್ಲೇ ನಿಂತಿದ್ದಳು

ಅಂದು ರಾತ್ರಿ ಕೃಷ್ಣನನ್ನು ಮಲಗಿಸಿ. ಪದ್ಮ ತಾನೂ ಮಲಗಿ ದ್ದಳು ತನಗಿನ್ನೂ ನಿದ್ದೆ ಬಂದಿರಲಿಲ್ಲ. ಚಂದ್ರಕಾಂತಿಯು ಕಿಟಕಿಯಿಂದ ಕಿಟಕಿಯ ಬಳಿಯಲ್ಲೇ ಮಲಗಿದ್ದ ಪದ್ಮಳ ಮುಖದ ಮೇಲೆ ಬಿದ್ದಿತ್ತು. ಅವಳೆದುರಾಗಿಯೇ ಒಂದು ಕುರ್ಚಿಯನ್ನಳೆದುಕೊಂಡು ಕೂತು

ಸಿಗರೇಟೊಂದನ್ನು ಸುಡುತ್ತಾ ಶ್ರೀನಿವಾಸನು ಅವಳನ್ನೇ ದಿಟ್ಟಿಸಿ ನೋಡು ತ್ತಿದ್ದನು. ಬೆಳದಿಂಗಳ ಕಿರಣದಲ್ಲಿ ಮೊದಲೇ ಬೆಳ್ಳಗಿದ್ದ ಪದ್ಮ ಇನ್ನೂ ಬೆಳ್ಳಗೆ ಕಾಣುತ್ತಿದ್ದಳು. ಏನು ಕನಸು ಕಾಣುತ್ತಿದ್ದಳೋ, ಮುಗುಳ್ನಗೆ ಯೊಂದು ಅವಳನ್ನು ಅಲಂಕರಿಸಿತ್ತು. ಗಾಳಿಯಲ್ಲಿ ಚೆದುರಿ ಹಾರುತ್ತಿದ್ದ ಮುಂಗುರುಳೂ ಅದೊಂದು ಶೋಭೆಯನ್ನು ಕೊಟ್ಟಿತ್ತು ಅವಳ ಮುಖಕ್ಕೆ ಅವಳ ಆ ಚೆಲುವನ್ನು ನೋಡಿದಷ್ಟೂ, ಅನುಭವಿಸಿದಷ್ಟೂ ತನಗೆ ತೃಪ್ತಿಯಿಲ್ಲ ಆ ಚೆಲುವು ರಮ್ಯವಾತಾವರಣ, ಪ್ರೇಮಿಯ ತೃಪ್ತಿ ಮಿಗಿಲಾಗಿ ಅಪೂರ್ವವಾದ ಆತ್ಮಗಳ ಮಿಲನದ ತಮ್ಮ ದಾಂಪತ್ಯ ಇದು ನಿಜವೇ? . ನನ್ನದೇ ಇದೆಲ್ಲಾ? ...ಎಂದೆನಿಸುತ್ತಿತ್ತು ಒಮ್ಮೊಮ್ಮೆ ಅರಿಯದ ಅದಾವುದೋ ಒಂದು ಭೀತಿ ಅವನನ್ನಾವರಿಸಿ ನಡುಗಿಸು ತ್ತಿತ್ತು ಪದ್ಮಳ ಆ ಅಪೂರ್ವ ಶುದ್ಧಾತ್ಮದ ಪ್ರೀತಿಯ ಶೋಭೆ ಅವಳಿಗೆ ಅದೊಂದು ದೈವಿಕವಾದ ಚೆಲುವೊಂದನ್ನು ಕೊಟ್ಟಿತ್ತು ಅವಳ ಆ ನಿರ್ವಿಕಾರವಾದ ಆತ್ಮಶಾಂತಿ ಅವನನ್ನು ಬೆಚ್ಚಿ ಬೀಳುವಂತೆ ಮಾಡುತ್ತಿತ್ತು ಹೆಣ್ಣಿನಲ್ಲಿಯ ಆ ಶಕ್ತಿಗೆ ಅವನು ತಲೆಬಾಗಿದ್ದನು ನಿದ್ದೆಯಲ್ಲಿ ಪದ್ಮಳ ಕೈ ಅಪ್ಪುವ ರೀತಿಯಲ್ಲಿ ಮಂಚದಿಂದ ಹೊರಗೆ ಬಿತ್ತು! ಶ್ರೀನಿವಾಸನಿಗೆ ಎದೆಯುಬ್ಬಿತು ನಿದ್ದೆಯಲ್ಲೂ ತನಗಾಗೇ ನೀಡಿರುವ ಕೈಯನ್ನು ಮೆಲ್ಲಗೆ ಎತ್ತಿ ಪಕ್ಕದಲ್ಲಿರಿಸಿ ತೊಲಗಿ ಹೋದ ಅವಳ ಹೊದಿಕೆಯನ್ನು ಸರಿ ಯಾಗಿ ಹೊದಿಸುವಾಗ ಪದ್ಮಳಿಗೆ ಎಚ್ಚರವಾಯಿತು ಕಣ್ತೆರೆದು ತನ್ನನ್ನೆ ದಿಟ್ಟಿಸಿ ನೋಡುತ್ತಿರುವ ಗಂಡನನ್ನು ನೋಡಿ ‘ ಇನ್ನೂ ಮಲಗಲಿಲ್ಲ ವೇಕೆ?. ಎಷ್ಟು ರಾತ್ರಿಯಾಯಿತಲ್ಲ!'' ಎಂದಳು

‘‘ ಇಲ್ಲ ಪದ್ಮಾ, ನನ್ನ ದೇವಿಯ ಸೌಂದರ್ಯ ನನ್ನನ್ನು ತನ್ಮಯ ನನ್ನಾಗಿ ಮಾಡಿದೆ. ಪದ್ಮಾ, ನಿನ್ನ ಚೆಲುವನ್ನೆಲ್ಲಾ ಹೀರಬೇಕೆನ್ನಿಸುತ್ತೆ ನಿದ್ದೆ ಹೇಗೆ ಬಂದೀತು?''

‘‘ ನೀವಂತೂ ಬಿಡಿ, ಸೌಂದರ್ಯೋಪಾಸಿಗಳು! ನನ್ನಲ್ಲಿಲ್ಲದ ಚೆಲು ವೊಂದನ್ನು ಸೃಷ್ಟಿಸಿಕೊಂಡು ಏನೇನೋ ಹೇಳುತ್ತೀರಿ ರಾತ್ರಿ ಎಷ್ಟಾ ಯಿತು? ಮಲಗಿ ನನ್ನ ಧೊರೆ ಹೀಗಾದರೆ ಆರೋಗ್ಯ ಕೆಡುವುದಲ್ಲವೆ? ನಿಮ್ಮ ಪದ್ಮ ಎಲ್ಲಿ ಓಡಿಹೋಗುವುದಿಲ್ಲ ಬಿಡಿ ಕೃಷ್ಣನನ್ನು ಮಲಗಿಸಿದ ಹಾಗೆ ನಿಮ್ಮನ್ನು ಮಲಗಿಸಬೇಕೆ? ಮಲಗಿ ನನ್ನ ಧೊರೆ.'' ಎಂದು

ಮಲಗಿದನಂತರ, ತನಗೆ ಹೊದಿಕೆಯನ್ನು ಹೊದಿಸಿ ಹಣೆಯ ಮೇಲೆ ಕೈಯಾಡಿಸಿ ಹೋಗಿ ಮಲಗಿದಳು

* * * *

ಏಳೆಂಟು ತಿಂಗಳ ಗರ್ಭಿಣಿ. ಸ್ವಲ್ಪ ಆಯಾಸ. ಅವನ ಆರಾಮ ಕುರ್ಚಿಯ ಮೇಲೆ ಕುಳಿತಿದ್ದರೆ ತಾನು ಬದಿಯಲ್ಲೇ ಮತ್ತೊಂದು ಕುರ್ಚಿಯಲ್ಲಿ ಕುಳಿತಿದ್ದ

' ಪದ್ಮಾ, ಈ ಸಲ ನೀನು ಇನ್ನೂ ಚೆನ್ನಾಗಿ ಕಾಣುತ್ತಿದ್ದೀ. ಈ ಸಲವಂತೂ ಹೆಣ್ಣು ಖಂಡಿತ ನಿನ್ನ ಹಾಗ ಬಲು ಚೆಲುವೆ ಇದ್ದಾಳು!'' ಎಂದ ಶ್ರೀನಿವಾಸ.

'' ಊಹುಂ, ನಿಮ್ಮ ಹಾಗೇ ಇರಬೇಕು, ನನ್ನ ಮಕ್ಕಳೆಲ್ಲಾ '

'' ಊಹುಂ, ನಿನ್ನ ಹಾಗೇ ...''

'' ಹೋಗಲಿ, ಇಬ್ಬರ ಹಾಗೂ ಇರಬೇಕು . ಹೂಂ ..'' ಎಂದು ನಸುನಗುತ್ತಾ ರಾಜಿ ಮಾಡಿದ್ದಳು

ಅಷ್ಟರಲ್ಲಿ ವೆಂಕಮ್ಮನವರು ಬಂದು '' ಶ್ರೀನಿವಾಸ, ಎಲ್ಲಾದರೂ ಹಾಗೇ ಸುತ್ತಿ ಬಾ. ಗರ್ಭಿಣಿಗೆ ಗಂಡನ ಕಣ್ಣು ದೃಷ್ಟಿಯಾದೀತು. ಪದ್ಮಳ ಜತೆಗೆ ನಾನಿರುತ್ತೇನೆ'' ಎಂದರು

'' ಪದ್ಮಕ್ಕೆ ಸೂರ್ಯನ ದೃಷ್ಟಿ ಹೆಚ್ಚು ಬಲ ಕೊಡುತ್ತೆ ವೆಂಕಮ್ಮನವರೇ '' ಎಂದು ಪದ್ಮಳೆಂದಾಗ ಎಲ್ಲರೂ ನಕ್ಕಿದ್ದರು

ಇದಾದ ಎರಡು ಮೂರು ದಿನಕ್ಕೇ ಪದ್ಮಳಿಗ ನೋವು ಕಂಡಿತ್ತು ಅಕಾಲವಲ್ಲಿ ಕಂಡ ನೋವಿಗೆ ಗಾಬರಿ ಬಿದ್ದ ಶ್ರೀನಿವಾಸನು ಒಡನೆಯೇ ಪದ್ಮಳನ್ನು ಆಸ್ಪತ್ರೆಗೆ ಕರದುಕೊಂಡು ಹೋದನು. ಹೊಟ್ಟೆಯಲ್ಲೇ ಸತ್ತ ಮಗುವನ್ನು ಶಸ್ತ್ರಪ್ರಯೋಗದಿಂದ ಹೊರತೆಗೆಯಬೇಕಾಯಿತು. ಆ ಆಯಾಸದಲ್ಲಿ ಪದ್ಮಳ ಪ್ರಾಣ ಕಂಗೆಟ್ಟಿತ್ತು.

''ಹೇಗಾದರೂ ನನ್ನ ಉಳಿಸಿಕೊಳ್ಳಿ ನನ್ನ ದೊರೆ! ನಿಮ್ಮನ್ನು ಬಿಟ್ಟು ಹೋಗಲಾರೆ! '' ಎಂದು ಪದ್ಮ ತನ್ನ ಕೈಯನ್ನು ಗಟ್ಟಿಯಾಗಿ ಅದುಮುತ್ತಾ ಹೇಳಿದ್ದಳು. ಅವಳ ಆ ಮಾತು ತನ್ನ ಹೃದಯವನ್ನೇ ಹಿಂಡಿತ್ತು. ಡಾಕ್ಟರರ ಪ್ರವೀಣತೆ, ಶ್ರೀನಿವಾಸನ ಮೊರೆ, ಯಾವುದೂ ಪದ್ಮಳನ್ನು ಉಳಿಸಲಿಲ್ಲ. ಪದ್ಮ ಹೊರಟೇ ಹೋದಳು! ಐದು ವರ್ಷಗಳು ಉರುಳಿ ಹೋಗಿದ್ದವು ...

ನೆನಪುಗಳು ಒಂದೊಂದಾಗಿ ಬಂದು ಶ್ರೀನಿವಾಸನನ್ನು ಮುತ್ತಿದ್ದವು. ಕಣ್ಣೀರು ಕೆನ್ನೆಯ ಮೇಲೆ ಹಾಯ್ದು ಬೀಳುತ್ತಿತ್ತು. ಭಟ್ಟರ ಪೂಜೆಯ ಜಾಗಟೆಯ ಶಬ್ದ ಮತ್ತೆ ಅವನನ್ನು ಈ ಲೋಕಕ್ಕೆ ತಂದಿತು ಆದರೂ ಹಾಗೇ ಮಲಗಿದ್ದನು

ಭಟ್ಟರು ಅವನ ಕೋಣೆಯ ಬಾಗಿಲನ್ನು ಮೆಲ್ಲಗೆ ತೆಗೆದುಕೊಂಡು ಬಂದು "ಶ್ರೀನಿವಾಸ, ತೆಗೆದುಕೊಳ್ಳಪ್ಪ, ಬೇವು-ಬೆಲ್ಲವನ್ನು" ಎಂದು ಅವನ ಕೈಲಿ ಬೇವು-ಬೆಲ್ಲವನ್ನಿಟ್ಟರು ಅವನ ತೊಯ್ದ ಕಣ್ಣನ್ನು ನೋಡಿ ಕಾರಣವನ್ನು ಗುರುತಿಸಿ ಮರುಕದಲ್ಲಿ—

"ಹಿರಿಯರ ಸಾಂಪ್ರದಾಯ ಬೇವು-ಬೆಲ್ಲವನ್ನು ಈ ದಿನ ನುಂಗಬೇಕೆಂದು ಸುಖ-ದುಃಖಗಳನ್ನು ಜೀವನದಲ್ಲಿ ನುಂಗಲು ತೋರುವ ದಾರಿಯಿದು ಕಣ್ಣೀರು ಹಾಕಬೇಡ ಶ್ರೀನಿವಾಸ ಜೀವನದಲ್ಲಿ ಮುಂಚೆಯೇ ಬೆಲ್ಲವ ಸವಿಯನ್ನೇ ಹೆಚ್ಚಾಗಿ ಅನುಭವಿಸಿದೆ ಇಂದು ಕಹಿಯೇ ಉಳಿಯಿತು ದೇವರು ಎಲ್ಲಕ್ಕೂ ನಿನಗೆ ಶಕ್ತಿ ಕೊಡಲಿ." ಎಂದು ಆಶೀರ್ವದಿಸಿ ಹೊರಟು ಹೋದರು

ಕೈಯಲ್ಲಿ ಬೇವು-ಬೆಲ್ಲವನ್ನಿಟ್ಟುಕೊಂಡು ಹಾಗೇ ನಿಂತ ಶ್ರೀನಿವಾಸನನ್ನು "ಎಲೆ ಹಾಕಿದೆ, ಊಟಕ್ಕೆ ಬನ್ನಿ ಅಂದ್ರೆ, ಎಷ್ಟು ಹೊತ್ತು ಕಾಯುವುದು?" ಎಂದು ಸಾವಿತ್ರಿಯ ಧ್ವನಿ ಎಚ್ಚರಿಸಿತು.



## ಆಕೆ ‡ ‡ ‡ ‡ ‡

### ೧

ಎಷ್ಟು ಹೊತ್ತಿನಿಂದಲೋ, ಆಕೆ ಅಲ್ಲೇ ಕುಳಿತಿದ್ದಳು ಅರೆತೆರೆದ ಆಕೆಯ ಕಣ್ಣುಗಳಲ್ಲಿ ನಿರೀಕ್ಷಣೆಯಿತ್ತು ಎಲ್ಲೋ, ಯಾರಿಗಾಗೋ, ಹುಡುಕುತ್ತಲೇ ಇದ್ದವು ಆ ವೇದನಾಪೂರಿತವಾದ ಕಣ್ಣುಗಳು ದೂರ ದೂರ ಸಾಗಿ, ಬೆಟ್ಟ ಗುಡ್ಡಗಳನ್ನು ದಾಟಿ ಸಮುದ್ರದಿಂದಾಚೆ ಹೋಗುತ್ತಿದ್ದ ಆ ಕಣ್ಣುಗಳಲ್ಲಿಯ ದೃಷ್ಟಿ ಬಹಳ ತೀವ್ರವಾಗಿದ್ದರೂ, ಮ್ಲಾನವಾಗಿತ್ತು ಯಾರಿಗಾಗೋ ಹುಡುಕಿ, ಅಲೆದಾಡಿ ನಿರಾಶಗೊಂಡ ಕಣ್ಣುಗಳಿಂದ ದುಃಖಬಿಂದುಗಳು ಆಗಾಗ ಹೊರಚಿಮ್ಮುತ್ತಿದ್ದವು

ಸಂಜೆಗೆಂಪಿನ ಕಾಂತಿ ಆಕೆಯ ಕಣ್ಣುಗಳಲ್ಲಿ ಪ್ರಜ್ವಲಿಸುತ್ತಿತ್ತು ಆ ನದಿಯ ತಿಳಿನೀರಿನಲ್ಲಿ, ಸಂಜೆಗೆಂಪಿನ ಛಾಯೆ ಅತಿ ರಮಣೀಯವಾಗಿ ಶೋಭಿಸುತ್ತಿತ್ತು ಸೂರ್ಯನ ಅಸ್ತಮಿಸುವ ಕಿರಣದ ಛಾಯೆಯಲ್ಲಿ, ಆಕೆಯ ಅರೆನೆರೆದ ಕೂದಲು, ಬೆಳ್ಳಿಯಂತೆ ಹೊಳೆಯುತ್ತಿತ್ತು ಮುಖದಲ್ಲಿಯ ನೀರವ ಶಾಂತಿ, ಅಂದು ತಾನೇ ನಾನು ಶಾಲೆಯಲ್ಲಿ ಓದಿದ ಬುದ್ಧನ ನೆನೆಪು ತರುತ್ತಿತ್ತು ನನಗ, ನಮ್ಮ ಅಮ್ಮನಿಗಿಂತಲೂ, ಈಕೆಯೇ ಚೆನ್ನವೆನಿಸಿತು ಒಮ್ಮೆಯಾದರೂ ನನ್ನ ಕಡೆಗೆ ತಿರುಗಿದುದೇ ಇದರ, ಆ ಕಣ್ಣುಗಳಲ್ಲಿಯ ಪೂರ್ಣ ಕಾಂತಿಯನ್ನಾದರೂ ಕಂಡೇನು ಎನ್ನಿಸಿತು ಆಕೆಗ ಒಂದಿಷ್ಟು ದೂರದಲ್ಲೇ ಕುಳಿತೆ ಸಂಜೆಗೆಂಪು ಆಕೆಯ ಮುಖದ ಮೇಲೆ ಬಿದ್ದು, ಆಕೆಯಿಟ್ಟ ಕುಂಕುಮದ ಕೆಂಪನ್ನು ಇನ್ನೂ ಹೆಚ್ಚಿಸಿತ್ತು ಆ ಕೆಂಪಿನಲ್ಲಿರುವ ಸೊಬಗು, ಆಕರ್ಷಣೀಯವಾಗಿದ್ದರೂ ಏಕೆಂದು ನನಗರ್ಥವಾಗಲಿಲ್ಲ ಅಮ್ಮನಿಡುವ ಕುಂಕುಮದ ಬಣ್ಣ ಕೆಂಪು. ಸೂರ್ಯನು ಹೊರಬರುವಾಗ ಕೆಂಪು, ಅಸ್ತಮಿಸುವಾಗಲೂ ಕೆಂಪು, ತಾಂಬೂಲರಾಗದ ಬಣ್ಣ ಕೆಂಪು, ತಿಳಿಮಾವಿನ ಚಿಗುರೂ ನಸುಗೆಂಪು, ಭಾವ ಬಂದಾಗ ಅಕ್ಕನ ಗಲ್ಲವೂ ಕೆಂಪು,— ಈ ಕೆಂಪಿನಲ್ಲಿರುವ ಸೂಚ್ಯಾರ್ಥವಾದರೂ ಏನೋ! ಈ ದಿನ ಅಪ್ಪನನ್ನು ಕೇಳಲೇಬೇಕೆಂದು ಯೋಚಿಸುತ್ತ ಕುಳಿತ ಆಕೆಯನ್ನು ಮರೆತೇ ಬಿಟ್ಟೆ.

ಸಂಜೆಗೆಂಪು ಮರೆಯಾಗಿ, ಮಬ್ಬುಗತ್ತಲು ತಲೆಯಿಕ್ಕಿತು ಆಕೆಯ ಕಡೆಗೊಮ್ಮೆ ನೋಡಿದೆ ಆಕೆಯೂ ನನ್ನೆಡೆ ದೃಷ್ಟಿ ಬೀರಿದಳು ನನ್ನಲ್ಲಿ ಆಕೆಯ ದೃಷ್ಟಿ ನಿಂತಾಗ, ಏಕೋ, ಚಕಿತಳಾದಂತೆ ಬೆಚ್ಚಿದಳು ಒಂದೇ ಸಮನೆ, ರೆಪ್ಪೆಮುಚ್ಚದೆ, ನನ್ನನ್ನೇ ನೋಡಹತ್ತಿದಳು ನೀರ್ತುಂಬಿದ ಆಕೆಯ ಕಣ್ಣುಗಳಲ್ಲಿ ಕಾಂತಿಯೊಂದು ಹೊರಚಿಮ್ಮಿತು ತಿಳಿನಗೆಯೊಂದು ಆ ದೀನ ಮುಖದಲ್ಲಿ ಹಾಯ್ದು ಹೋಯಿತು ನನ್ನೆಡೆಗೇ ನೋಡುತ್ತಾ “ಬಾ” ಎಂದು ಕೈಸನ್ನೆ ಮಾಡಿದಳು ಅಂಜುತ್ತ ಆಕೆಯ ಬಳಿ ಹೋಗಿ ಕುಳಿತೆ ಸೆರಗಿನಲ್ಲಿ ಮುಚ್ಚಿದ್ದ ತನ್ನ ಕೈಯನ್ನು ಹೊರತೆಗೆದು ನನ್ನ ಗಲ್ಲವನ್ನು ಹಿಡಿದು, ನನ್ನ ಮುಖವನ್ನೊಮ್ಮೆ, ಆ ನಸುಗತ್ತಲಲ್ಲಿ ಕಾಣುವ ಬೆಳಕಿಗೆ ಹಿಡಿದು ನೋಡಿದಳು

‘ಎಷ್ಟು ಮುದ್ದಾಗಿದ್ದೀಯ ಮಗೂ! ಅದೇ ಬಣ್ಣ, ಅದೇ ಕಾಂತಿ, ಅದೇ ನಸುನಗು!” ಎಂದು ನನ್ನ ಮುಖವನ್ನೆಲ್ಲಾ ಸವರಿಸಿದಳು ಆ ಕೈಗಳಲ್ಲಿನ ಮೃದುತನದಲ್ಲಿ, ಆಕೆಯ ಮಾರ್ದವ, ಹೃದಯದಲ್ಲಿನ ಅನಂತ ಪ್ರೇಮ ಹರಿದು ನನ್ನ ದೇಹದಲ್ಲೆಲ್ಲಾ ಚಲಿಸಿತು ನನಗೆ, ಆಕೆ ಹಾಗೇ ಬದಿಯಲ್ಲಿ ಕುಳಿತು ಸವರಿಸುತ್ತಿದ್ದರೆ, ಎಷ್ಟೋ ಹಿತವಾಗಿತ್ತು ಒಮ್ಮೆಯಾದರೂ, ಮನೆಯಲ್ಲಿ ಯಾರಿಂದಲೂ, ಅಂತಹ ಆದರವು ಎಂದೂ ನನಗೆ ಸಿಕ್ಕಿರಲಿಲ್ಲ ಅಜ್ಜಿ ಯಾವಾಗಲೂ ಕೆಮ್ಮುತ್ತ, ಎಲೆಯಡಿಕೆ ಕುಟ್ಟಿ-ಕೊಳ್ಳುವುದರಲ್ಲೇ ಮಗ್ನಳಾಗಿರುತ್ತಿದ್ದಳು. ಅಕ್ಕ ಗಂಡನ ಮನೆಯಲ್ಲಿರುತ್ತಿದ್ದಳು ಅಮ್ಮ ಯಾವಾಗಲೂ ಮನೆಗೆಲಸ ಇಲ್ಲದಿರುವಾಗಲೂ, ಬಹಳ ಸಿಡಿಸಿಡಿ ಮಾಡುತ್ತಿದ್ದಳು “ಏನೂ, ಗಲಾಟೆ ಸಾಕಾಗಿ ಹೋಗುತ್ತೆ! ಹೋಗಿ ಎಲ್ಲಾದರೂ ಹೊರಗೆ ಆಡಿಕೊ” ಎಂದು ಗದ್ದರಿಸುತ್ತಿದ್ದಳು. ಇನ್ನು ಅಪ್ಪ? ಅಪ್ಪ ಮನೆಯಲ್ಲಿ ಯಾರೊಡನೆ ಮಾತಾಡಿದ್ದು ಎಂದೂ ನಾನು ನೋಡಿರಲಿಲ್ಲ ಯಾವಾಗಲೂ ತನ್ನ ಕೋಣೆಯಲ್ಲಿ ಓದುತ್ತಲೊ, ಬರೆಯುತ್ತಲೊ ಇರುತ್ತಿದ್ದರು ಅಮ್ಮ ಎಂದಾದರೂ ನನ್ನ ಹೊಡೆದು, ನಾನು ಗಟ್ಟಿಯಾಗಿ ಅತ್ತದ್ದೇ ಆದರೆ, ಅಪ್ಪ ಮೆಲ್ಲಗೆ ನನ್ನ ಬಳಿಗೆ ಬಂದು “ಅಮ್ಮನನ್ನು ತೊಂದರೆ ಮಾಡಬೇಡ ಮಗು ಹೋಗಿ ಓದಿಕೋ ಹೋಗು” ಎಂದು ತಲೆ ಸವರುತ್ತಿದ್ದರು. ಅಪ್ಪನ ಕಣ್ಣಲ್ಲೂ ಅದೊಂದು ಬಗೆಯ ನೋವು, ಎಂದೂ ಕಾಣುತ್ತಲೇ ಇತ್ತು. ಈ ವಾತಾವರಣ

ದಲ್ಲಿದ್ದ ನನಗೆ, ಆಕೆಯಲ್ಲಿನ ಆ ಪ್ರೀತಿ ಅಮೃತಪ್ರಾಯವಾಗಿತ್ತು. ಆಕೆಯ ಕೈಗಳು ಎಷ್ಟು ಸುಂದರವಾದುವು? ಆಕೆಯ ಆ ಮಧುರ ಧ್ವನಿಯಲ್ಲಿ ಪ್ರೀತಿ ತುಂಬಿ ತುಳುಕಾಡುತ್ತಿತ್ತು. ಸಹನೆ, ಒಲುಮೆ, ಶಾಂತಿ. ಆಕೆಯಲ್ಲೇ ಮೂರ್ತಿಗೊಂಡಂತಿತ್ತು. ಆಕೆಯ ಜೀವನವು ಶಾಂತಿಯುತವಾಗಿತ್ತೊ, ಇಲ್ಲವೊ ಅರಿಯೆ, ಆದರೆ ಆಕೆಯ ಬದಿಯಲ್ಲಿ ಕುಳಿತ ನನಗೆ ಮಾತ್ರ ತೀರ ಹಿತವಾಗಿತ್ತು. ತೃಪ್ತಿ ಶಾಂತಿಗಳೆಂದರೆ ಇವೇ ಇದ್ದೀತು ಎನ್ನಿಸಿತು ಆಕೆ, ಇನ್ನೂ ನನ್ನ ಬಳಿಗೇ ಸರಿದು ನನ್ನ ಮುಖವೆತ್ತಿ ಒಮ್ಮೆ ಮುತ್ತಿಟ್ಟಳು. ಅಮ್ಮ ಎಂದೂ ಹಾಗೆ ನನ್ನ ಮುತ್ತಿಟ್ಟಿರಲಿಲ್ಲ.

" ನಿನ್ನ ಹೆಸರೇನು ಮಗೂ ? " ಎಂದಳು.

" ಶಂಕರ. "

" ಶಂಕರ....! " ಎಂದು ತಾನೂ ಒಮ್ಮೆ ಹೇಳಿದಳು ಹೇಳಿದಾಗ ಕಂಠ ಅದುರಿತು. ಕಣ್ಣುಗಳು ಒದ್ದೆಯಾಗಿದ್ದವು.

" ಶಾಲೆಗೆ ಹೋಗುತ್ತೀಯಾ ಶಂಕರೂ? "

" ಹೂಂ "

" ಏನು ಓದುತ್ತೀ ? "

" ಹೈಸ್ಕೂಲಿನಲ್ಲಿ ಐದನೇ ಫಾರಂ "

" ಶಾಲೆಯಿಂದ ಬಂದನಂತರ ಆಟ ಆಡುತ್ತೀಯಾ? "

" ಹೂಂ. ಅಕ್ಕಪಕ್ಕದ ಹುಡುಗರ ಬಳಿಕೆಯಲ್ಲಿ ಆಡುತ್ತೇನೆ "

" ಮನೆಯಲ್ಲಿ ಯಾರು ಯಾರು ಇದ್ದಾರೆ ಶಂಕರಾ ? "

" ಅಜ್ಜಿ, ಅಪ್ಪ, ಅಮ್ಮ . ಅಕ್ಕ ಗಂಡನ ಮನೇಲಿ ಇದ್ದಾಳೆ ನನ್ನ ಜತೆಗೆ ಆಡಲು ಮನೆಯಲ್ಲಿ ಯಾರೂ ಇಲ್ಲ! ಒಬ್ಬನೇ ಏನಾದರೂ ಆಟ ಆಡುತ್ತಿದ್ದರೂ,ಅಮ್ಮನಿಗೆ ಸಿಟ್ಟು ಬರುತ್ತೆ ಗಲಾಟೆ ಮಾಡುತ್ತೀಯೆಂದು ಗದರಿಸುತ್ತಾಳೆ.

' ಅಪ್ಪ ? "

" ಅಪ್ಪ ಯಾರ ಮೇಲೂ ಸಿಟ್ಟು ಮಾಡುವುದಿಲ್ಲ ಇಷ್ಟಕ್ಕೂ ಅಪ್ಪ ಮನೆಯಲ್ಲಿರುವುದೇ ಅಪರೂಪ ಬೆಳಿಗ್ಗೆ ಹೋದರೆ ರಾತ್ರಿ ತಾನೆ ಬರುತ್ತಾರೆ ಮನೆಯಲ್ಲಿದ್ದರೂ, ಯಾವಾಗಲೂ ತನ್ನ ಕೋಣೆಯಲ್ಲಿ ಬರೆಯುತ್ತಲೋ ಅಥವಾ ಓದುತ್ತಲೋ ಇರುತ್ತಾರೆ! "

"ಹೋಗಲಿ ಶಂಕರಾ, ಈಗ ನಮ್ಮ ಮನೆಗೆ ಹೋಗೋಣ ಬಾ" ಎಂದು ನನ್ನ ಕೈಹಿಡಿದು ಎಬ್ಬಿಸಿದಳು. ಆಕೆ ಎದ್ದು ನಿಂತಾಗ, ತೀರ ಚಿಕ್ಕ ಹುಡುಗಿಯಂತ ಕಂಡಳು. ಆಕೆಯೊಡನೆ, ಆಕೆಯ ಕೈಹಿಡಿದು ನಡೆಯುತ್ತಲೇ ಇದ್ದೆ. ತೀರ ನನ್ನ ವಯಸ್ಸಿನ ಸನ್ನೊಡನಾಡಿಯಂತೆ, ಮಾತನಾಡುತ್ತ, ಶಾಲೆಯ ವಿಚಾರವೆಲ್ಲಾ ಕೇಳುತ್ತಿದ್ದಳು. ಆ ಮಾತಿನ ಸರಳತೆಗೆ, ನನಗ ಆಕೆಯಲ್ಲಿದ್ದ ಅಷ್ಟಿಷ್ಟು ಅಂಜಿಕೆಯೂ ಇಲ್ಲದಾಯಿತು.

ಇಷ್ಟರಲ್ಲೇ ಅವರ ಮನೆ ಬಂತು. ಸುಂದರವಾದ ಮನೆ. ಮನೆಯ ಮುಂದೆ ಸಣ್ಣ ಹೂದೋಟ. ತೋಟದಲ್ಲಿ, ಮನೆಯ ಮುಂಬಾಗಿಲಿಗೆ ಎದುರಾಗಿ ಒಂದು ಸಣ್ಣ ಮಂಟಪ. ಮಂಟಪಕ್ಕೆ ಮಲ್ಲಿಗೆಯ ಬಳ್ಳಿಯನ್ನು ಹಬ್ಬಿಸಿದೆ. ಮಂಟಪದಲ್ಲಿ, ಕುಳಿತುಕೊಳ್ಳಲು ಒಂದು ಕಲ್ಲಿನ ಸೋಫಾ. ಅದರೆದುರಾಗಿ, ಶಿವಪಾರ್ವತಿಯರ ಸುಂದರ ವಿಗ್ರಹ. ಪಾರ್ವತಿ ಶಿವನ ಪಕ್ಕದಲ್ಲಿ, ಶಿವನ ಭುಜಕ್ಕೆ ತಲೆಯೂರಿಸಿ, ನಿಮೀಲಿತನಯನಳಾಗಿ ಕುಳಿತಿದ್ದಾಳೆ. ಶಿವನ ಜಟೆಯಿಂದ ಸುರಿಯುತ್ತಿದ್ದ ಗಂಗೆ ಅಲ್ಲೇ ಇದ್ದ ಒಂದು ಸಣ್ಣ ತೊಟ್ಟಿಯಲ್ಲಿ ಬೀಳುತ್ತಿದ್ದಳು. ಅದರ ಸುತ್ತಲೂ ಹೂಗಿಡಗಳು. ಬಹಳ ಸುಂದರವಾಗಿದ್ದುವು. ಓರ್ವ ಸೌಂದರ್ಯೋಪಾಸಿಯ ತಪಃಕುಟೀರದ ಶಾಂತಿ ಸೌಂದರ್ಯ ಅಲ್ಲಿ ಒಮ್ಮೆ ತೋರುತ್ತಿತ್ತು. ಅದೆಲ್ಲವನ್ನೂ ಬಳಸಿ ದಾಟುತ್ತ ಒಳಕ್ಕೆ ಹೋದೆವು. ಅಲ್ಲಿದ್ದ ಸಾಮಾನುಗಳಲ್ಲಾ ನನಗೆ ಬಹಳ ಚೆನ್ನವೆನಿಸಿದುವು. ಮನೆಯ ತುಂಬಾ ಚಲುವಾದ ಚಿತ್ರಗಳು ಬಗೆಬಗೆಯ ಸಾಮಾನುಗಳು. ಯೋಗಸಮಾಧಿಯಲ್ಲಿಯ ಶಂಕರನನ್ನು ಸುಂದರಿಯಾದ ಪಾರ್ವತಿ ಬೇಡುತ್ತಿರುವ ಚಿತ್ರ ನನಗೆ ಬಹಳ ಚೆನ್ನವೆನಿಸಿತು. ಅಂತಹುದೇ ಚಿತ್ರವನ್ನೇ ನಮ್ಮ ಅಪ್ಪನ ಕೋಣೆಯಲ್ಲೂ ನೋಡಿದ್ದೆ. ಎಲ್ಲವನ್ನೂ ಬಹಳ ಓರಣವಾಗಿ ಇಟ್ಟಿದ್ದರು. ಕಪಾಟಿನಲ್ಲಿ ಮೇಜಿನ ಮೇಲೆ, ಹಲವಾರು ದೊಡ್ಡ ದೊಡ್ಡ ಪುಸ್ತಕಗಳಿದ್ದವು. ಯಾರವು ಅವು? ಹಾಗೇ ಎಲ್ಲವನ್ನೂ ನೋಡುತ್ತಿರುವಾಗ, ಒಂದು ಸಣ್ಣ ತಟ್ಟೆಯಲ್ಲಿ, ಹಾಲು ಖೋವ,ಹಣ್ಣು ಎಲ್ಲವನ್ನೂ ತೆಗೆದುಕೊಂಡು ಬಂದು, ಆಕೆ ನನ್ನ ಕೈಯಲ್ಲಿತ್ತಳು. ಬೇಡವೆಂದೆನಗಲಿ,ಹಾಲು ಖೋವವನ್ನು ನೋಡಿ, ಬಾಯಲ್ಲಿ ನೀರೂರಿತ್ತು. ಹೊಟ್ಟೆ ಹಸಿದಿತ್ತು. ಆಕೆ ತಾನೇ, ನನ್ನ ಬಾಯಲ್ಲಿಡಹೋದಳು.

"ತಿನ್ನು ಮಗೂ, ಸಿಹಿ ನಿನಗಿಷ್ಟವಿಲ್ಲವೆ ?" ಎಂದಳು
ಎಲ್ಲಾ ತಿಂದು ಮುಗಿಸಿದೆ

ನಂತರ ಮತ್ತೊಂದು ಬಾರಿ ನನ್ನನ್ನಪ್ಪಿ ಮುದ್ದಿಸಿ "ಶಂಕರೂ, ಈಗ ರಾತ್ರಿಯಾಯಿತು ಮನೆಯಲ್ಲಿ ಹುಡುಕಾಡ್ತಾರೆ ಹೋಗಿ ಬಾ ಮಗು, ದಿನವೂ ಶಾಲೆಯಿಂದ ಹೀಗೇ ಬಾ ನನಗ ತುಂಬಾ ಕಥೆಗಳು ಬರುತ್ತವೆ ಹೇಳುತ್ತೇನೆ ಆಟಗಳು ಸಹ ಆಡೋಣ, ಈ ದಿನ ಹೋಗಿ ಬಾ" ಎಂದು ನನ್ನನ್ನು ತನ್ನ ದಾಸಿಯೊಡನೆ ಕಳುಹಿದಳು

ಮನೆಗೆ ಬಂದೊಡನೆಯೇ ಅಮ್ಮ "ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದಿ ಶಂಕರೂ! ರಾತ್ರಿಯೆಲ್ಲಾ ಸುತ್ತುವುದು ಕಲಿ! ಬಹಳ ಚೆನ್ನಾಗಿರುತ್ತೆ!" ಎಂದು ಗೊಣಗಾಡಿದರಾಗಲಿ, ನನಗಾವುದೂ ಅಂದು ನೋಕಲಿಲ್ಲ ಮನಸ್ಸೇಕೋ, ಬಹಳ ಹಗುರವಾಗಿತ್ತು ಮತ್ತೆ ಎಂದು ಆ ನಾಳ ಸಂಜೆ ಆದೀತು? ಆಕೆಯ ಬಳಿ ಹೋದೇನು? ಅನ್ನಿಸಿತು ಮಲಗುವಾಗಲೂ ಆಕೆಯ ಸುಂದರ ಸೌಮ್ಯ ಮುಖ, ಅರಸರಿದ್ದರೂ ಸುಂದರವಾಗಿದ್ದ ಆಕೆಯ ಗುಂಗುರು ಮುಂಗುರುಳು ಕಾಣುತ್ತಲೇ ಇತ್ತು ಆಕೆಯ ಕಣ್ಣಿನಲ್ಲಿಯ ಆ ದೂರದ ನೋಟ, ನೀವನೆ ಎಲ್ಲೋ ಕಂಡಿದ್ದೇ? ಯಾರಲ್ಲಿ? ... ... ನೆನೂ .. ಹಾಗೇ ನಿದ್ದೆ ಬಂತು

೨

"ಮಗೂ ಈ ದಿನವೇಕೆ ಇಷ್ಟು ಹೊತ್ತಾಯಿತು?" ಎಂದಳು ಆಕೆ

"ಗೇಮ್ಸ್ ಕ್ಲಾಸಿತ್ತು, ಹಾಗೆಂದು ಸಿಧಾನವಾಯಿತು ಮನೆಯಲ್ಲಿ ಪುಸ್ತಕ ಬಿಸಾಟಿದ್ದೇ. ಬಂದೇ ಓಟ!"

"ಹೌದೇ! ಶಂಕರೂ, ನಿನಗೆ ಇಲ್ಲಿಗೆ ಬರಲೆಂದರೆ ಅಷ್ಟು ಇಷ್ಟವೆ? ಮಗೂ ಮುಖ, ಕೈಕಾಲು, ಎಲ್ಲಾ ಧೂಳಾಗಿವೆ ಬಾ, ಮುಖ ತೊಳೆಯುವೆಯಂತೆ" ಎಂದು, ಟವಲು, ಸೋಪು, ಎಲ್ಲವನ್ನೂ ತೆಗೆದು ಕೊಂಡು ನನ್ನನ್ನು ನೀರಿನ ಮನೆಗೆ ಕರೆದುಕೊಂಡು ಹೋದಳು. ಆಕೆಗೇಕೆ ನಾನೆಂದರೆ ಅಷ್ಟು ಪ್ರೀತಿಯೊ, ಆಕೆ ಯಾರೋ. ನನಗೇನೂ ಅರ್ಥವಾಗುತ್ತಿರಲಿಲ್ಲ ಆದರೆ ಆಕೆಯ ನಿರ್ಮಲ ಮಾತೃತ್ವ, ಅದೊಂದು ಬಗೆಯ ಆಕೆಯ ಆ ವೇದನಾಪೂರಿತವಾದ ಮುಖಮುದ್ರೆ, ನನ್ನನ್ನು

ಆಕರ್ಷಿಸಿತ್ತು. ಮುಖ ತೊಳೆದು ಬಂದಾದ ಮೇಲೆ, ತಾನೇ ಟವಲಲ್ಲಿ ಮುಖವನ್ನು ಕೈ ಕಾಲನ್ನೆಲ್ಲಾ ಚೆನ್ನಾಗಿ ಒರೆಸಿದಳು.

“ಇರು ಮಗು, ಸ್ವಲ್ಪ ಬಾಚುತ್ತೇನೆ. ಆಮೇಲೆ ತಿಂಡಿ ತರುವೆ ” ಎಂದು ಬಾಚಲುವಕ್ರಮಿಸಿದಳು ನಂತರ ನನ್ನ ಗಲ್ಲವನ್ನಿಡಿದು, ಅತ್ತಿತ್ತ ತಿರುಗಿಸಿ, ಮುಖವನ್ನೇ ನೆಟ್ಟ ದೃಷ್ಟಿಯಲ್ಲಿ ನೋಡುತ್ತಾ “ಮೇಲಕ್ಕೆ ಬಾಚಿದರೆ. ಎಲ್ಲಾ ಅದೇ ರೂಪ. ಶಂಕರೂ, ನಿನ್ನ ಹಡೆದಾಕೆ ಎಷ್ಟು ಪುಣ್ಯಾತ್ಮಳು!” ಎಂದು ಗಟ್ಟಿಯಾಗಿ ನನ್ನನ್ನು ತನ್ನ ಎದೆಗವಚಿಕೊಂಡಳು ಆಗೀಗ, ಆಕೆಯಲ್ಲಿಯ ಇಂತಹ ಉದ್ವೇಗ ನೋಡಿ ನನಗೆ ಆಶ್ಚರ್ಯವಾಗುತ್ತಿತ್ತು.

“ಅದೇ ರೂಪವೆಂದಿರಿ. ಮೌಶಿ, ಯಾರ ರೂಪ ?” ಎಂದೆ ಆಗ ಆಕೆಯ ಕಣ್ಣಲ್ಲಿ ನೀರು ಚಿಮ್ಮಿತ್ತು.

“ಶಂಕರೂ, ಎಂತಹ ಪ್ರಶ್ನೆಗಳನ್ನು ಕೇಳುತ್ತೀ ಮಗೂ ! ಬಾ, ಹೊರಗೆ ಹೋಗೋಣ.”

ಇಬ್ಬರೂ ತೋಟದೊಳಕ್ಕೆ ಬಂದೆವು. ಸಂಜೆ ಹಿಂದಾಗಿತ್ತು ಹುಣ್ಣಿಮೆಯ ಚಂದ್ರನು ಪೂರ್ಣಾಕಾರವಾಗಿ, ಮೇಲಕ್ಕೆ ಬರುತ್ತಿದ್ದನು. ತೋಟದಲ್ಲಿಯ ಹೂಗಳ ಪರಿಮಳ ಗಾಳಿಯಲ್ಲಿ ಕಲೆತು ಮೆಲ್ಲನೆ ಓಡಾಡುತ್ತಿತ್ತು. ಎಲ್ಲೆಲ್ಲೂ ಪ್ರಶಾಂತತೆ ಹರಡಿತ್ತು. ಆಕೆ, ನನ್ನ ಪಕ್ಕದಲ್ಲೇ ಮಾತಡದೆ, ಹಾಗೇ ಕುಳಿತಿದ್ದಳು. ಆಕೆ ಪ್ರಕೃತಿಯ ಪೂಜಾರಿಣಿಯಂತಿದ್ದಳು....

“ಮೌಶಿ, ಈ ಬೆಳದಿಂಗಳು ಎಷ್ಟು ಚೆನ್ನಾಗಿದೆ, ಅಲ್ಲವೆ ಮೌಶಿ? ” ಎಂದೆ.

“ಆ ತಂದೆಯ ಮಗನಲ್ಲವೆ ? ಅಂತೇ ಪ್ರಕೃತಿಸೌಂದರ್ಯವನ್ನು ಮೆಚ್ಚುವ ಗುಣ, ಈಗಾಗಲೇ ನಿನ್ನಲ್ಲಿ ನೆಟ್ಟಿದೆ. ” ಎಂದಳು.

“ನಮ್ಮಪ್ಪನನ್ನು ಬಲ್ಲಿರಾ ಮೌಶಿ ? ” ಎಂದೆ.

“ಅದಿರಲಿ ಶಂಕರೂ. ಕನ್ನಡ ಪಂಡಿತರು ಬಂದಿದ್ದರೆ? ಚಾಣಕ್ಯನ ಕಥೆ ಪೂರ್ತಿ ಮಾಡಿದರೆ ? ”

“ಇಲ್ಲ ಮೌಶಿ. ಈ ದಿನ ಬಲೆ ಗಮ್ಮತ್ತಿತ್ತು ....ಪಾಪ.... ಬೇಡ. ಆ ಪಂಡಿತರ ಪಾಡು ಈ ದಿನ ”

“ಏಕೆ ? ಏನಾಯಿತು ? ”

"ನೋಡಿ ಮೌಶಿ, ಕನ್ನಡ ಪಂಡಿತರು ಕ್ಲಾಸಿನಲ್ಲಿ ಕಾಲಿಡುತ್ತಲೂ ಹುಡುಗರೆಲ್ಲರೂ ಒಬ್ಬೊಬ್ಬರಾಗಿ ಕೆಮ್ಮಲು ಶುರುಮಾಡಿದರು ಅವರು ಎಲ್ಲರನ್ನೂ ಗದ್ದರಿಸಿ, ತಾನೂ ಕುರ್ಚಿಯ ಮೇಲೆ ಕುಳಿತುಕೊಂಡು, ಕಿಸೆಯಿಂದ ನಶ್ಯದ ಡಬ್ಬಿಯನ್ನು ತೆಗೆದು ನಿಧಾನವಾಗಿ ನಶ್ಯವನ್ನು ಮೂಗಿಗೇರಿಸುತ್ತಿದ್ದರು. ಪಾಪ ಮೌಶಿ, ದೊಡ್ಡ ಗಾಳಿಯೊಂದು ಬಂದು, ಆ ಮೇಜಿನ ಮೇಲಿದ್ದ ನಶ್ಯದ ಡಬ್ಬಿ ಕೆಳಗುರುಳಿತು. ಅಲ್ಲೇ ಸುತ್ತಾ ಕೂತ ಹುಡುಗರ ಮೂಗಿಗೆಲ್ಲಾ ಘಾಟ ಏರಿತೊ ಏನೊ, ಎಲ್ಲರೂ ಶೀನಲಿಕ್ಕೆ ಶುರು ಮಾಡಿವರು.... ....... ! ಅದೇನು ಮೌಶಿ, ಅಷ್ಟೊಂದು ನಗುತ್ತಿದ್ದೀರಿ ?"

". ಮತ್ತೆ ! ಏನು ಚೇಷ್ಟೆ ಹುಡುಗರಪ್ಪಾ ನೀವು ... ಪಾಪ ಕನ್ನಡ ಪಂಡಿತರ ಕ್ಲಾಸಂದರೇನೇ ಹಾಗೆ. ಹುಡುಗರಿಗೆ ತಮಾಷ! ಆಮೇಲೆ? "

"ಸರಿ, ಆಮೇಲೇನು, ಪಂಡಿತರಿಗೆ ಸಿಟ್ಟು ಬಂತು. ಮೇಜಿನ ಮೇಲೆ ಕೈಗುದ್ದಿ, ನಿಮಗೇಕೂ ಪಾಠ! ಶುದ್ಧ ಮುರ್ಖ್ಖಳ ಹುಡುಗರು! ಗಂಧದ ವಾಸನೆ ಕತ್ತೆಗೇನು ಗೊತ್ತೊಂತ, ನಿಮಗೇಕೆ ಇದ್ದೀತು ಓದು! ಪಾಠ!" ಎಂದು ಎದ್ದೇ ಬಿಟ್ಟರು.

" ಹೌದು ಸಾರ್ ! ಕತ್ತೆಗೆ ಗಂಧದ ವಾಸನೆ ಸೇರೊಲ್ಲ ! ನಶ್ಯದ ವಾಸನೆಯೇ ಇಷ್ಟ!" ಅಂದ ಒಬ್ಬ ತುಂಟ. ಪಂಡಿತರ ಸಿಟ್ಟು ತಲೆಗೇರಿರಬೇಕು, ಬಿಚ್ಚಿ ಹೋಗುತ್ತಿದ್ದ ತಮ್ಮ ಪಂಚೆಯ ಕಚ್ಚೆಯನ್ನು ಸರಿಪಡಿಸಿಕೊಳ್ಳುತ್ತಾ "ಇಂತಹ ಲಂಪಟರಿಗೆ ನಾನು ಪಾಠ ಮಾಡುವುದಿಲ್ಲಾ " ಅಂತ ಹೊರಟೇ ಹೋದರು ಮೌಶಿ,........"

" ಹಾಗೆಲ್ಲಾ ಅನ್ನಬಾರದಾಗಿತ್ತಲ್ಲವೆ ಶಂಕರೂ? ಅವರು ಗುರುಗಳಲ್ಲವೆ? ಆ ತುಂಟ ಹುಡುಗರ ಜತೆಯಲ್ಲಿ ನೀನು ಸೇರಲಿಲ್ಲ ತಾನೇ ? "

" ಇಲ್ಲ ಮೌಶಿ........ ಆದರೆ ನಗು ಬರುತ್ತಲ್ಲವೆ ? ಅಂತೇ ನಾನೂ ಗಟ್ಟಿಯಾಗಿ ನಕ್ಕುಬಿಟ್ಟೆ "

" ಶಂಕರೂ, ಕ್ರಿಕೆಟ್ ಮ್ಯಾಚ್ ಎಂದು ಹೇಳಿದೆಯಲ್ಲವೆ? ಪ್ರಾಕ್ಟೀಸು ಮಾಡುತ್ತಿದ್ದೀಯಾ? "

" ಊಹೂಂ. ಆ ಕ್ಯಾಪ್ಟನ್ ಒಂಟು ಬಗೆಯುವನು. ತನ್ನದೇ ದೊಡ್ಡ

ದೂಂತ! ಎಲ್ಲರೂ ಅವನ ಮಾತೇ ಕೇಳಬೇಕು. ಹಾಗೆಂದು ನನಗೆ ಅವನು ಸರಿ ಹೋಗುವುದಿಲ್ಲ ಟ್ರೇಂ, ಬಿಟ್ಟುಬಟ್ಟೆ! ಅದೂ ಇಲ್ಲಿಗ ಬರ ಬೇಕಂದು ಒಂದೇ ಆಶ, ಮಾತಿ ಯಾವುದೂ ಬೇಡ. ಇಲ್ಲಿಗೇ ಎಳೆ ಯುತ್ತ ಕಾಲು" ಎಂದೆ

'ನನ್ನ ಚಿನ್ನಾ! ಎಲ್ಲ ಅವರಂತೆಯೇ!" ಎಂದು ನನ್ನ ತಲೆಯನ್ನು ನೇವರಿಸಿದಳು.

"ಯಾರಂತೆ, ಮೌತಿ?"

"ಯಾರಿಲ್ಲ ಶಂಕರೂ, ಸುಮ್ಮನೆ ಹಾಗಂದೆ"

"ಉಹುಂ ಅಲ್ಲ. ಹೇಳಿ ಮೌತಿ ನನ್ನನ್ನು ನೋಡಿದರೆ, ನಿಮ ಗ್ಯಾರದ್ದೋ ನನಪು ಬರುತ್ತ, ಹೌದೆ ಮೌತಿ?"

"ಹೂಂ ಶಂಕರ" ಎಂದು ಆಕ ತಲೆ ಬಗ್ಗಿಸಿದಳು ಆಕೆಯ ಕಣ್ಣೀರಿನಿಂದೊಂದು ನನ್ನ ಕಾಲ ಮೇಲೆ ಬಿತ್ತು

"ಮೌತಿ "

"ಏನು ಶಂಕರೂ?"

"ನಿಮ್ಮನ್ನು ನೋಡಿದಾಗ, ಅನೇಕ ಬಾರಿ, ಅಪ್ಪನ ನೆನಪಾಗುತ್ತೆ. ನೀವು ನಕ್ಕಾಗ, ಕಣ್ಣಲ್ಲಿ ನೀರ್ತುಂಬಿದಾಗ, ನದೀತೀರದಲ್ಲಿ ಕುಳಿತು ನದಿ ಯೆಡೆ ನೋಡುವಾಗ, ಅದೇ ದೃಷ್ಟಿ! ಅದೇ ಮುಖಭಾವ ...."

"ಶಂಕರೂ, ನಿನ್ನದು ಕವಿಹೃದಯ! ಅವರಂತಯೇ! ಮಗೂ, ಅಪ್ಪನ ಕಣ್ಣಲ್ಲಿ ನೀರೇಕ?"

"ಏನೋ ಮೌತಿ, ನಾನು ಎಷ್ಟೋ ಸಲ ನೋಡಿದ್ದೇನೆ, ಒಬ್ಬನೇ ಕುಳಿತು ಕಿಟಿಕಿಯಿಂದಾಚೆ ನೋಡುವಾಗ, ಶಂಕರ-ಪಾರ್ವತಿಯರ ಪಟಕ್ಕೆ ಅಗರಬತ್ತಿಯನ್ನು ಹಚ್ಚಿಡುವಾಗ: ಎಷ್ಟೋ ಬಾರಿ. ನೀವೂ, ಅಪ್ಪನೂ ಒಂದಾಗೇ ಕಾಣುವಿರಿ! ಬೇರೆ ಬೇರೆ ಇಬ್ಬರು ಹಾಗೆ ಒಂದಾಗಿ ಕಾಣಲು ಸಾಧ್ಯವೆ ಮೌತಿ?"

"ಸಾಧ್ಯ ಮಗೂ ಆತ್ಮಗಳು ಒಂದಾಗಿದ್ದರೆ"

"ಅಪ್ಪ ಬಹಳ ಒಳ್ಳೆಯವರು ಮೌತಿ ಅಪ್ಪನನ್ನು ನೀವು ಬಲ್ಲಿರಾ?"

"ಶಂಕರೂ.... .. ನೋಡು. ಬೆಳದಿಂಗಳಲ್ಲಿ ಆಡುವ ಆಟಗಳು ಬಹಳ ಇವೆ.... ಟೋಪಿ ಆಟ..."

" ಹೂಂ ಹೌದು ಆದರೆ ಅದಕ್ಕೆ ತುಂಬಾ ಹುಡುಗರು ಬೇಕಲ್ಲವೆ? ರಾಮೂ, ಶೀನ, ಜಯು, ಎಲ್ಲಾ ಬಂದರೆ ಚನ್ನಾಗಿರುತ್ತೆ "

" ನಾಳೆ ಎಲ್ಲರನ್ನೂ ಕರೆದುಕೊಂಡು ಬಾ. ತಿಂಡಿ ಕೊಡೋಣ. ಆ ಮೇಲೆ ಆಟ ..."

" ನಾನೆಂದರೆ ಅದೇಕೆ ನಿಮಗಿಷ್ಟು ಪ್ರೀತಿ? "

" ಮಗೂ, ನಿನ್ನ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳಲಾರೆ ! ದೊಡ್ಡವನಾದಾಗ ತಿಳಿದೀತು ! ಪ್ರೀತಿಸುವುದೇ ನನ್ನ ಸ್ವಭಾವ ಅದಲ್ಲೂ ನಿನ್ನಂತಹ ಬಂಗಾರದಂತಹ ಹುಡುಗನನ್ನು ಯಾರು ಪ್ರೀತಿಸದೆ ಇರಬಲ್ಲರು ಹೇಳು ? ಶಂಕರೂ, ಈ ದಿನ ಹೊತ್ತಾಯಿತು ಅಮ್ಮ ಪಾಪ ನೀನು ಬರಲಿಲ್ಲನೆಂದು ಕಷ್ಟಪಟ್ಟಾಳು. ಹೋಗು ... .. " ಎಂದು ಕಳುಹಿಕೊಟ್ಟಳು

೩

ಆ ದಿನ ಸಂಜೆ ಮನೆಗೆ ಹೋಗುವ ವೇಳೆಗೆ, ಊರಿಂದ ನಮ್ಮಜ್ಜ ಬಂದಿದ್ದರು ಅಮ್ಮನಿಗೆ ಸ್ವಲ್ಪ ಸಿಟ್ಟು ಬಂದಿತ್ತು

" ಅಜ್ಜ ಬಂದಿದ್ದಾರೆ ಎಲ್ಲಿ ಹೊರಟು ಹೋಗಿದ್ದೆ ಶಂಕರಾ ? ದೀಪ ಇಡುವ ವೇಳೆಗೆ ಮನೆಗೆ ಬರಬೇಕಾಗಿಲ್ಲವ ? ತಿಂಡಿ ಸಹ ತಿನ್ನುವುದಿಲ್ಲ ಈ ನಡುವೆ ಎಷ್ಟೊಪ್ಪ ! " ಎಂದು ಬೇಸರಿಸಿಕೊಂಡು ಅಡಿಗೆ ಮನೆಯಲ್ಲಿಗೆ ಹೋದಳು ನಾನು ಆಕೆಯ ಮನೆಗೆ ಹೋಗುವುದಾಗಲಿ, ಆಕೆಯನ್ನು ಕುರಿತಾಗಲಿ ಮನೆಯಲ್ಲಿ ಯಾರಿಗೂ ಹೇಳಿರಲಿಲ್ಲ. ಅದೇಕೊ, ಆಕೆಯ ವಿಚಾರ ಅಮ್ಮನಿಗೆ ಹಿತವಾಗಿರಲಾರದೆಂಬ ಒಂದು ಬಗೆಯ ತಿಳಿವಳಿಕೆ ನನ್ನಲ್ಲಿ ಮೂಡಿತ್ತು ಅದೇಕೆ ಹಾಗೆಂದು ಹೇಳಲಾರೆ ಅಮ್ಮನಿಗೆ ತಿಳಿಸಿದ್ದೇ ಆದರ ಅಲ್ಲಿಗೆ ನನ್ನನ್ನು ಕಳುಹಿಸಲೊಪ್ಪುವುದಿಲ್ಲವೆಂಬದೊಂದು ಅಭಿಪ್ರಾಯವಿತ್ತು ಅಲ್ಲಿಗೆ ಹೋಗದೆ, ಆಕೆಯೊಡನೆ ಇರದೆ ಇರುವುದು ನನಗೆ ಬಹಳ ಕಷ್ಟವಾಗುತ್ತಿತ್ತು ಆಕೆಯ ಮಾತಿನಲ್ಲಿ, ಪ್ರತಿಯೊಂದು ರೀತಿಯಲ್ಲೂ ಪ್ರೀತಿಯ ಮಾರ್ದವವೇ ಕಾಣುತ್ತಿತ್ತು ಆಕೆಯು ಹೇಳುತ್ತಿದ್ದ ಸಣ್ಣ ಪುಟ್ಟ ಕಥೆಗಳೂ, ಇತಿಹಾಸಗಳೂ, ಚರಿತ್ರೆಗಳೂ, ಕವಿಗಳ ಜೀವನಗಳೂ ನನಗೆ ಬಹಳ ಇಷ್ಟವಾಗುತ್ತಿದ್ದವು. ಆಕೆಯೊಡನೆಯೇ ಇದ್ದುಬಿಡೋಣವೇ ಎನ್ನಿಸುತ್ತಿತ್ತಾಗಲಿ, ಅಮ್ಮನನ್ನು

ಬಿಟ್ಟು ರಾತ್ರಿಹೊತ್ತು ಇರಲೂ ನನಗಾಗುತ್ತಿರಲಿಲ್ಲ ...ಅಮ್ಮ ಒಳ್ಳೆಯು ವಳು ...ಆಕೆಯುಂತಲ್ಲಾಗಲಿ, ಅಮ್ಮನೇ ನನಗೆ ಬಹಳ ಹಿತ ಆದರೂ ಯಾವುದೊ ಒಂದು ಶಕ್ತಿ, ನನ್ನನ್ನು ಆಕೆಯೆಡೆಗೂ ಎಳೆಯುತ್ತಿತ್ತು.

ಬೆಳಿಗ್ಗೆ, ಇನ್ನೂ ಮಲಗಿದ್ದಾಗಲೇ ಅಮ್ಮ ಬಂದು ನನ್ನನ್ನು ಎಚ್ಚರಿಸಿದಳು "ಏಳು ಶಂಕರೂ, ಅಜ್ಜನೊಟ್ಟಿಗೆ, ಊರಿಗೆ ಹೋಗ ಬೇಕು ಬೇಗ ಸ್ನಾನಮಾಡಿ ಬಟ್ಟೆಗಳನ್ನು ಹಾಕಿಕೊಂಡು ತಯಾರಾಗು" ಎಂದು ದಡಬಡಿಸಿದರು. ನಾನು ಊರಿಗೆ ಹೋಗುವ ಸಮಾಚಾರವಾ ದರೂ ಆಕೆಗೆ ತಿಳಿಸಲಾಗುವುದಿಲ್ಲವೆಂದು ಮನಸ್ಸಿಗೆ ತುಂಬಾ ದುಃಖ ವಾಯಿತು. ತೀರ ಇನ್ನೂ ಉಪ್ಪಿಟ್ಟು ತಿನ್ನುತ್ತಿರುವಾಗಲೇ, ಅಜ್ಜ ಹೋಗಿ, ಗಾಡಿ ತಂದೇ ಬಿಟ್ಟರು. ಗಾಡಿಯಲ್ಲಿ ಹಾಸಿಗೆ, ಪೆಟ್ಟಿಗೆ ಎಲ್ಲವನ್ನೂ ಇಟ್ಟಾಯಿತು. ಅಮ್ಮ ತಾನು ಗಾಡಿಯನ್ನು ಹತ್ತಿ, ನನ್ನನ್ನೂ ಅವಸರಿಸಿ ದಳು. ಬಾಗಿಲಲ್ಲಿ ನಿಂತಿದ್ದ ಅಪ್ಪ, ಗಾಡಿಯ ಹತ್ತಿರ ಬಂದು, 'ಬೇಗ ಬಾ ಶಂಕರೂ, ಯಾರಲ್ಲೂ ಜಗಳವಾಡಬೇಡ ಅಪ್ಪನಿಗೆ ಕಾಗದ ಬರೆಯುತ್ತೀ ಯಲ್ಲವೆ? " ಎಂದು ಮೃದುವಾಗಿ, ಗಲ್ಲ ಹಿಡಿದು ಮುಖವೆತ್ತಿದಾಗ ಆಕೆಯ ನೆನೆಪು ಬಂತು.

"ಅಪ್ಪಾ ......."

"ಏನು ಮಗೂ ? "

"ಆಕೆಗೆ ಹೇಳಲೇ ಇಲ್ಲಪ್ಪಾ ! ಪಾಪ. ಎಷ್ಟು ನೊಂದುಕೊಳ್ಳು ತ್ತಾಳೊ ? "

"ಯಾರು ಮಗು? " ಎಂದು ಅಪ್ಪ ಕೇಳುತ್ತಿರುವಾಗಲೇ, ಗಾಡಿ ಯವನು, ಚಾಟಿಯಾಡಿಸಿ, ಗಾಡಿಯನ್ನು ಮುಂದಕ್ಕೆ ಬಿಟ್ಟೇಬಿಟ್ಟ.

ಅಜ್ಜನ ಊರು ಹಳ್ಳಿ ಆದರೂ ಬಹಳ ಚೆನ್ನಾಗಿತ್ತು ಕಬ್ಬಿನ ತೋಟಗಳೂ, ಮಾವಿನ ತೋಟಗಳೂ, ಆವೂರಿನ ಕೆರೆಯ ಇಕ್ಕೆಲದಲ್ಲಿ ಬಹಳ ಸೊಗಸಾಗಿದ್ದವು ಕಬ್ಬಿನ ಹಾಲು, ಎಳೆಮಾವು, ಎಲ್ಲಾ ನಮ್ಮ ಪಾಲೇ ಆಗುತ್ತಿದ್ದವು ಬಿಸಿಬಿಸಿ ಬೆಲ್ಲವನ್ನು ತಿನ್ನುತ್ತ, ಸುತ್ತ ಸುತ್ತ ತಿರುಗಿ ಹೋಗುತ್ತಿದ್ದ ಆ ಕೆರೆಯೇರಿ ಮೇಲೆ ನಡೆಯುವುದು ನನಗೆ ಬಹಳ ಹಿಗ್ಗೆನಿಸಿತ್ತು. ಅದರಲ್ಲೂ ಸಂಜೆಯ ಸಮಯ, ಆ ಕೆರೆಯೇರಿಯ ಮೇಲೆ ನಿಂತು ನೋಡುತ್ತಿದ್ದರೆ ಕೆರೆಯನ್ನು ದಾಟಿ, ದಟ್ಟವಾಗಿ ಬೆಳೆದು ನಿಂತಿದ್ದ

ಮಾವಿನತೋಪು, ಅದರ ಹಿಂದಕ್ಕೆ ನೀಲಾಕಾರದ ಬೆಟ್ಟಗಳು. ಸಂಜೆಯ ಸೂರ್ಯ ಆ ಬೆಟ್ಟಗಳ ಮಧ್ಯೆ ತೂರಿ ಹೋಗುತ್ತಿದ್ದರೆ ಯಾರಿಗೆ ಭಯಪಟ್ಟು ಮರೆಯಾಗುತ್ತಿದ್ದಾನೆಯೋ ಸೂರ್ಯ ಎಂದೆನಿಸುತ್ತಿತ್ತು. ಕಬ್ಬಿನ ತೋಟದಲ್ಲಿಯ ಕಾದ ಕಬ್ಬಿನ ಹಾಲಿನ ವಾಸನೆ, ಮಾವಿನ ಹೂಗಳ ಸಿಹಿಗಂಪು ಬಹಳ ಹಿತವಾಗಿರುತ್ತಿತ್ತು. ಕೆರೆಯ ಬಳಿ, ಆ ಊರಿನ ಹೆಂಗಸರೆಲ್ಲಾ ನೀರಿಗೆಂದೂ ಬಟ್ಟೆಯೊಗೆಯಲೆಂದೂ ಬರುತ್ತಿದ್ದರು. ಅವರ ಮಾತುಗಳು, ನಗುವಾಟ, ಒಮ್ಮೊಮ್ಮೆ ಜಗಳ, ಮಕ್ಕಳ ಕೂಗಾಟ, ಎಲ್ಲ ಒಂದು ಬಗೆಯ ನಿರಾಡಂಬರ ಜೀವನದ ಕಳೆಯನ್ನು ತೋರುತ್ತಿತ್ತು. ನಮ್ಮೂರಲ್ಲಿ ಈ ಬಗೆಯ ನೋಟ ನೋಡಲು ಅವಕಾಶವಿರಲಿಲ್ಲ, ಅದು ಪಟ್ಟಣವೆಂದು !

ಅವೆಲ್ಲವನ್ನೂ ನೋಡುತ್ತ ಎಷ್ಟು ಹೊತ್ತಾದರೂ ಹಾಗೇ ನಿಂತಿರುತ್ತಿದ್ದೆ. ಆಗೆಲ್ಲಾ ಆಕೆಯು ನೆನಪಿಗೆ ಬರುತ್ತಿದ್ದಳು. ಓಡಿ ಹೋಗಿ ಆಕೆಯ ಮಡಿಲಲ್ಲಿ ತಲೆಯಿಡೋಣವೆನಿಸುತ್ತಿತ್ತು. ಹದಿನೈದು ದಿನಗಳನ್ನು ಬರೇ ಆಟವಾಟದಲ್ಲೇ ಕಳೆದಿದ್ದೆ. ಅಪ್ಪನಿಗೆ ಉತ್ತರವನ್ನೂ ಬರೆದಿದ್ದೆ. ಆಕೆಗೆ ಬರೆಯೋಣವೆಂದರೆ, ನನಗೆ ಆಕೆಯ ಹೆಸರು ಕೂಡ ತಿಳಿಯದು. ಒಮ್ಮೆ ಆಕೆಯನ್ನು ಕೇಳಿದ್ದಾಗ "ನನಗೆ ಹೆಸರೇ ಇಲ್ಲ ಮಗೂ, ಪೌತಿ ಎಂದು ಕರೆ'' ಎಂದು ಹೇಳಿದ್ದಳು.

ಆಕೆಯ ಮುಖದಲ್ಲಿಯ ಶಾಂತಿ, ಆ ಕಣ್ಣುಗಳಲ್ಲಿಯ ನೋವಿನೊಂದಿಗೆ ಮಿಳಿತವಾದ ದೂರದ ನೋಟ, ಆಕೆಯಲ್ಲಿಯ ಸಹಾನುಭೂತಿ, ಇವುಗಳು ನನ್ನನ್ನು ತೀರ ತಮ್ಮ ವಶಮಾಡಿಕೊಂಡಿದ್ದವು. ಎಷ್ಟೋ ಬಾರಿ, ಆಕೆಯು ಕಥೆ ಹೇಳುತ್ತಿದ್ದರೆ, ಆಕೆಯ ತೊಡೆಯ ಮೇಲೆ ತಲೆಯಿಟ್ಟು ಹಾಗೇ ನಿದ್ದೆ ಮಾಡುತ್ತಿದ್ದೆ. ಒಮ್ಮೊಮ್ಮೆ ಆಕೆಯ ಕಣ್ಣೀರು ನನ್ನ ಕೆನ್ನೆಯ ಮೇಲೆ ಬಿದ್ದು, ಆ ಬಿಸಿಗೆ ಎಚ್ಚರಗೊಳ್ಳುತ್ತಿದ್ದೆ.

ಒಂದು ದಿನ ಬೆಳಗಾದಾಗಲೇ ಅವರ ಮನೆಗೆ ಹೋಗಿದ್ದೆ. ತಲೆಗೂದಲನ್ನು ಕೆಳಗಿಳಿಯ ಹಾಕಿ, ಕಣ್ಮುಚ್ಚಿ ದೇವರೆದುರಾಗಿ ಕುಳಿತು, ದೇವರ ಧ್ಯಾನದಲ್ಲೇ ತನ್ಮಯಳಾದ ಆಕೆಯ ಮುಖದಲ್ಲಿ ಅದೊಂದು ಬಗೆಯ ತೇಜಸ್ಸು ಪ್ರಜ್ವಲಿಸುತ್ತಿತ್ತು. ಆಕೆಯ ಧ್ಯಾನಕ್ಕೆ ಭಂಗ ಬಾರದಿರಲೆಂದು, ಮೆಲ್ಲಗೆ ಆಕೆಯ ಬಳಿಯಲ್ಲಿಯೇ ಕುಳಿತೆ. ಎಷ್ಟು ಹೊತ್ತಾದರೂ

ಏಳಲೇ ಇಲ್ಲ. ಕಣ್ಣಲ್ಲಿ ಮಾತ್ರ ನೀರು ಧಾರಾಕಾರವಾಗಿ ಸುರಿದುಹೋಗು ತ್ತಿತ್ತು. ಅಷ್ಟಾಗಿ ದೇವರಲ್ಲಿ ಆಕೆ ಮೊರೆಯಿಡುತ್ತಿದ್ದುದು ಯಾವ ವರ ಕ್ಕಾಗಿಯೋ ? ಆಕೆಯ ಆ ತನ್ಮಯತೆ ನನಗೆ ಆಶ್ಚರ್ಯವಾಯಿತು.

ಎಷ್ಟು ಹೊತ್ತಾದರೂ ಆಕೆ ಏಳದಿರುವುದನ್ನು ನೋಡಿ, ನಾನು ಎದ್ದು ಆಕೆಯ ಕೋಣೆಯೊಳಕ್ಕೆ ಹೋದೆ. ಆ ಮನೆಯಲ್ಲಿ ಎಲ್ಲು ಹೋಗಲೂ, ಏನು ಮಾಡಲೂ ನನಗೆ ಸ್ವೇಚ್ಛೆ ಇದ್ದಿತು. ಮಕ್ಕಳಿಲ್ಲದ ಆ ಮನೆಯಲ್ಲಿ ನಾನೇ ಮಗುವಾಗಿದ್ದೆ. ಆಕೆಯ ಕೋಣೆ ಬಹಳ ನಿರಾ ಡಂಬರವಾಗಿದ್ದರೂ ಬಹು ಶುಭ್ರವಾಗಿ ಇರುತ್ತಿತ್ತು. ಕಪಾಟನ್ನು ತೆಗೆದು ಚಿತ್ರಪುಸ್ತಕಗಳನ್ನು ತೆಗೆಯುವ ಎಂದು ಬಗೆದು ಕಪಾಟದ ಬಾಗಿಲನ್ನು ತೆರೆದೆ. ಅದರಲ್ಲಿ ಒಂದು ಸಣ್ಣ ಪೆಟ್ಟಿಗೆ ನನ್ನನ್ನು ಆಕರ್ಷಿ ಸಿತು. ಪೆಟ್ಟಿಗೆಯ ಮುಚ್ಚಳ ಅರೆತೆರೆದಿತ್ತು. ಪೂರಾ ತೆಗದು ಒಳಗೆ ನೋಡಿದೆ ಅದರಲ್ಲಿ ಒಂದು ವರ್ಷದ ಮಗುವಿಗೆ ಸರಿಹೋಗುವ ವೂಲಿ ನಲ್ಲಿ ಹೆಣೆದ ನಾಲ್ಕೈದು ಅಂಗಿಗಳಿದ್ದವು. ಅವುಗಳನ್ನು ಹೆಣೆದು ವರ್ಷ ಗಳೆಷ್ಟಾಗಿತ್ತೊ! ಅಲ್ಲಲ್ಲಿ ಹುಳುಗಳು ಕಡಿದ ಕಿಂಡಿಗಳು ಇದ್ದವು.ಆದರೂ ಎಷ್ಟೊ ಚೆನ್ನಾಗಿದ್ದವು ! ಒಂದೊಂದಾಗೇ ತೆಗೆದೆ. ಬಹುಶಃ ಆಕೆ ಹೆಣೆ ದಿದ್ದೇ ಇದ್ದೀತು. ಆಕೆಗೆ ಮಕ್ಕಳಿರುವರೇ? ಇದ್ದರೇ? ಎಂದು ಯೋಚಿ ಸುತ್ತಿರುವಲ್ಲಿ ಆಕೆಯೇ ಬಂದಳು.

" ಏನು ನೋಡುತ್ತಿದ್ದೀ, ಮಗೂ ?"

" ಇವು ಯಾರವು ಮೌಶಿ ? ಇಷ್ಟು ಸಣ್ಣವು ? "

" ನಿನ್ನದೇ ಶಂಕರೂ........... ನೀನು ತೀರ ಸಣ್ಣವನಾಗಿದ್ದಾಗ ಹಾಕಿದ್ದು. "

" ಹಾಗಾದರೆ ನನ್ನನ್ನು ನೀವು ಮುಂಚೆಯೇ ಬಲ್ಲಿರಾ ಮೌಶಿ ? ಮತ್ತೆ ನಮ್ಮ ಮನೆಗೆ ಯಾಕೆ ಬರುವುದಿಲ್ಲ? ಮೌಶಿ, ಇವು ನನಗೆ ಸಣ್ಣ ಮಗುವಾಗಿದ್ದಾಗ ತೊಡಿಸಿದರೇ?........ಏಕೆ ಮೌಶಿ ! ಹಾಗಿದ್ದೀರಿ ? "

" ಏನಿಲ್ಲ ಮಗೂ. ನಿನಗೆಂದೇ ಹಾಕಿದೆನಾಗಲಿ ನಿನಗೆ ಮುಟ್ಟಿಸ ಲಾಗಲಿಲ್ಲ........"ಆಕೆಯ ಕಣ್ಣಲ್ಲಿ ನೀರೂರುತ್ತಿತ್ತು........

" ಮೌಶಿ, ಈಗ ಹಾಕಿ ಕೊಡುವಿರಾ.... ? ನಮ್ಮ ಮನೆಗೆ ಬನ್ನಿ ಮೌಶಿ,...ಅಪ್ಪನಿಗೆ ನಿಮ್ಮನ್ನು ಕಂಡರೆ ತೀರ ಇಷ್ಟವಾದೀತು. "

“ ಶಂಕರರೂ, ಅಪ್ಪ ಒಳ್ಳೆಯವರಲ್ಲವೆ ? ”

“ ಹೌದು ಮೌಶಿ.... ಬಹಳ, ನಿಮ್ಮ ಹಾಗೆ. ಮನೆಗೆ ಬರುತ್ತೀರಾ ಮೌಶಿ ? ”

“ ಈಗ ಬೇಡ ಮಗೂ........ ” ಎಂದು ಕಣ್ಣೊರಸಿಕೊಂಡು ನನ್ನನ್ನಪ್ಪಿಕೊಂಡಳು.

ಇಂತಹ ಸನ್ನಿವೇಶಗಳೆಲ್ಲಾ ನೆನಪು ಬರುತ್ತಿತ್ತು ಒಮ್ಮೊಮ್ಮೆ ಆಕೆಯ ಮಾತುಗಳು ಒರಟಾಗಿ, ಅರ್ಥವಾಗದಂತಿರುತ್ತಿತ್ತು. ಒಮ್ಮೆ ಕೇಳಿದ್ದೆ, “ಮೌಶಿ, ನಿಮಗೆ ನನ್ನ ಕಂಡರೆ, ಮಗನ ಹಾಗೆ ಪ್ರೀತಿಯಲ್ಲವೆ? ನಿಮಗೆ ಬೇರೆ ಮಗನಿಲ್ಲವೆ ? ”

“ ಶಂಕರೂ, ನೀನೇ ನನ್ನ ಮಗು.... ”

“ ಅದು ಹೇಗೆ ಮೌಶಿ ! ಅಪ್ಪ ಅಮ್ಮ ಅವರ ಮಗನಲ್ಲವೆ ನಾನು ........ ? ”

“ ನೀನರಿಯಲಾರೆ ಮಗೂ.... ನಿನ್ನ ಮತ್ತು ನನ್ನ ಭಾಂದವ್ಯ ಜನ್ಮಜನ್ಮಾಂತರದಿಂದ ಬೆಳೆದುಬಂದಿದ್ದು ” ಎಂದು ಹೇಳಿದಳಾಗಲಿ, ನನಗೇನೂ ಅರ್ಥವಾಗಲಿಲ್ಲ.

ಆಕೆಯೊಬ್ಬ ದುಃಖಜೀವಿಯೆಂದು ಮಾತ್ರ ತಿಳಿಯುತ್ತಿತ್ತು. ನನ್ನಿಂದ ಆಕೆ ಅನುಭವಿಸುತ್ತಿದ್ದ ಹಿತವೂ ಹೆಚ್ಚೆಂದೇ ಮನವರಿಕೆಯಾಗುತ್ತಿತ್ತು ಈ ನೆನಪುಗಳಲ್ಲಿ, ಆಕೆಯನ್ನು ನೋಡಬೇಕೆಂಬಾಶೆ ನನ್ನಲ್ಲಿ ಹೆಚ್ಚಾಗುತ್ತಿತ್ತು. ಒಮ್ಮೊಮ್ಮೆ ಅಮ್ಮನಿಗೆ ಹೇಳಬೇಕೆನ್ನಿಸುತ್ತಿತ್ತಾಗಲಿ, ಅದೇಕೊ, ಹೇಳಲು ಹಿಂಜರಿಯುತ್ತಿದ್ದೆ

ಹದಿನೈದು ದಿನಗಳ ನಂತರ, ಮತ್ತೆ ಊರಿಗೆ ಬಂದೆ. ಶಾಲೆಯ ರಜವೂ ತೀರಿತ್ತು ಅಪ್ಪ ಸ್ಟೇಶನ್‌ಗೆ ಬಂದಿದ್ದರು. ಮನೆಗೆ ತಲುಪುವ ವೇಳೆಗೇನೇ ಕತ್ತಲಾಗಿತ್ತು. ಆಕೆಯನ್ನು ನೋಡುವ ಬಯಕೆ ಹೆಚ್ಚಾಗಿತ್ತಾಗಲಿ, ಆ ರಾತ್ರಿಯಲ್ಲಿ ಹೊರಹೊರಡುವೆನೆಂದರೆ, ಯಾರೂ ಒಪ್ಪಲಾರರೆಂದು, ಆಕೆಯನ್ನು ನೆನೆಯುತ್ತಲೇ ಮಲಗಿದೆ

ಮೂರನೇ ದಿನ, ಬೆಳಗಾದನಂತರ ಶಾಲೆಗೆ ಹೊರಡಲು ತಯಾರಾಗಿ ಹೊರಟೆನಾಗಲಿ, ಶಾಲೆಗೆ ಹೋಗಲಿಲ್ಲ ಕಾಲ್ಗಳು ನೇರಾಗಿ ಆಕೆಯ ಮನೆಯೆಡೆಗೇ ಹೊರಟವು. ನಾ:ರಿಯದ ನೋವೊಂದು

ನನ್ನನ್ನಾವರಿಸಿತ್ತು. ಮನಸ್ಸಿನಲ್ಲಿ ಯಾವುದೋ ಒಂದು ಭೀತಿ ಮೂಡಿತ್ತು. ಆಕೆಯ ಮನೆ ಹತ್ತಿರ ಬರುತ್ತ, ಎದೆ ಹೊಡೆತ ಜಾಸ್ತಿಯಾಗುತ್ತಿತ್ತು. ಬಾಗಿಲಲ್ಲಿ ಆಕೆಗಾಗಿ ಎದುರುನೋಡುತ್ತಾ ಹೋದೆ. ಆಕೆಯಿರಲಿಲ್ಲ. ಅಪಶಕುನದಂತೆ ಎದುರಾದಳು, ಆಕೆಯ ಆ ಕಪ್ಪು ಮೋರೆಯ ದಾಸಿ

" ಬಂದಿರಾ ಶಂಕರೂ, ಅಮ್ಮಾವರು ನಿಮಗಾಗಿ ಚಡಪಡಿಸುತ್ತಿದ್ದಾರೆ ......"

" ಎಲ್ಲಿ ? ಎಲ್ಲಿ ಅಮ್ಮಾವರು? "

" ಮೆಲ್ಲಗೆ ...ಮೆಲ್ಲಗೆ ಶಂಕರೂ ಅಮ್ಮಾವರಿಗೆ ಮೈ ಹುಶಾರಿಲ್ಲ, ಕೋಣೆಯೊಳಗೆ ಮಲಗಿದ್ದಾರೆ. ಮೆಲ್ಲಗೆ ಹೋಗಿ. "

" ಆಕೆಗೆ ಏನಾಗಿದೆ ? ಪಾಪ .... " ಎಂದೆನ್ನುತ್ತಲೇ ಆಕೆಯ ಕೋಣೆಯೊಳಕ್ಕೆ ಹೋದೆ. ಆಕೆ ಮಂಚದ ಮೇಲೆ ಮಲಗಿದ್ದಳು. ನನ್ನನ್ನು ಕಂಡರಕ್ಷಣವೇ, ತಾನು ಹೊದೆದ ಶಾಲುವಿನೊಳಗಿನಿಂದ, ತನ್ನ ಕೈಗಳೆರಡನ್ನೂ ತೆಗೆದು, ಸಣ್ಣ ಮಗುವಿಗಾಗಿ ಚಾಚುವಂತೆ ಚಾಚಿದಳು. ನಾನು ಆಕೆಯ ಪಕ್ಕದಲ್ಲೇ ಕುಳಿತೆ. ಆಕೆಯ ಕೈಗಳೆಲ್ಲಾ ಈ ಹದಿನೈದು ದಿನದಲ್ಲೇ ನವೆದು ಹೋಗಿದ್ದವು. ತಲೆಗೂದಲು ಇನ್ನೂ ಬೆಳ್ಳಗಾಗಿತ್ತು. ಮುಖ ರಕ್ತಹೀನವಾಗಿ ಬಿಳಿಚಿಕೊಂಡಿತ್ತು. ಆದರೂ ಆ ಒಲುಮೆಯ ಕಿರುನಗೆ, ಶಾಂತಿ ಸಹಾನುಭೂತಿಗಳು ಆ ಮುಖದಲ್ಲಿ ನಾಟ್ಯವಾಡುತ್ತಿದ್ದುವು.

" ಮೌಶಿಯನ್ನು ಬಿಟ್ಟು, ಎಷ್ಟು ದಿನ ಹೊರಟುಹೋದೆ ಮಗೂ! .... ಎಲ್ಲಿಗೆ ಹೋಗಿದ್ದೆ ಶಂಕರೂ ? ಊರಲ್ಲಿಲ್ಲವೆಂದರು.... "

" ಹೌದು ಮೌಶಿ. ಅಜ್ಜನ ಮನೆಗೆ ಹೋಗಿದ್ದೆ. ನಿಮಗೆ ಹೇಳಿ ಹೋಗೋಣವೆಂದರೆ, ಅವಕಾಶವಾಗಲಿಲ್ಲ. ಮೌಶಿ, ನನಗೆ ಅಲ್ಲಿ ದಿನವೂ ನಿಮ್ಮ ನೆನಪೇ ! "

" ಮಗೂ, ಹಳ್ಳಿಯ ಜೀವನ ಬಲೆ ಸೊಗಸಲ್ಲವೆ ? ಸಣ್ಣವಳಾಗಿದ್ದಾಗ ನಾನೂ ಹಳ್ಳಿಯಲ್ಲಿದ್ದೆ. ಶಂಕರೂ. ಕಬ್ಬಿನ ಹಾಲು, ಬಿಸಿ ಬಿಸಿ ಬೆಲ್ಲ ಎಷ್ಟು ರುಚಿಕರವಾಗಿರುತ್ತೆ ಅಲ್ಲವೇ ?

" ಹೌದು ಮೌಶಿ. ಬಲೆ ಚೆನ್ನಾಗಿತ್ತು. ಅದಿರಲಿ ಮೌಶಿ, ನೀವು ಮಲಗಿದ್ದೀರೇಕೆ ? ಜ್ವರ ಬರುತ್ತಿದೆಯಲ್ಲವೆ ? ಡಾಕ್ಟರನ್ನಾರು ಕರೆತರು

ವರು, ಪೌರಿ ? ಅಪ್ಪನನ್ನಾದರೂ ಕರೆತರಲೆ ? ಅಪ್ಪನಿಗೂ ನಿಮ್ಮನ್ನು ನೋಡಿದರೆ ಇಷ್ಟವಾದೀತು. ಹೋಗಿ ಕರೆತರಲೆ ? ಅಪ್ಪ ಖಂಡಿತ ಬರುವನು ಪೌರಿ ''

'' ಬೇಡ. ಬೇಡ ಶಂಕರೂ, ಸಂಜೆಹೊತ್ತಿಗೆ ಸರಿಹೋಗುತ್ತೆ '' ಎಂದು ತನ್ನ ಕೈಬೆರಳುಗಳಲ್ಲಿ ನನ್ನ ಕೂದಲನ್ನು ನೇವರಿಸಿ ನನ್ನನ್ನು ಹತ್ತಿರಕ್ಕೆ ಬಗ್ಗಿಸಿ ತನ್ನ ಎದೆಗೆ ಗಟ್ಟಿಯಾಗಿ ಅಪ್ಪಿಕೊಂಡಳು ಆಕೆಯ ಮಾತೃತ್ವದಲ್ಲಿ, ವರ್ಣಿಸಲಾರದ ಒಂದು ಬಗೆಯ ಮಾಧುರ್ಯವನ್ನನು ಭವಿಸಿದೆ. ಆಕೆಯು ತನ್ನ ಕೆನ್ನೆಗೆ ನನ್ನ ಮುಖವನ್ನೊತ್ತಿದಾಗ ತಿಳಿ ಯಿತು, ಆಕೆಯು ತೀವ್ರ ಜ್ವರದಿಂದ ನರಳುತ್ತಿರುವಳೆಂದು

ಇಷ್ಟರಲ್ಲಿ ದಾದಿ ಬಂದಳು. ''ಅಮ್ಮಾ, ಆಯಾಸ ಹೆಚ್ಚಾಗುವುದು ಸುಮ್ಮನೆ ಮಲಗಿ ತಾಯಿ'' ಎಂದಳು ಆಕೆ ಅದನ್ನು ಕೇಳಿಯೂ ಕೇಳಿ ಸದ ಹಾಗೇ ಇದ್ದಳು

'' ಶಂಕರೂ ನೀನು ಬರುವಾಗ ಅಪ್ಪನು ಮನೆಯಲ್ಲಿದ್ದರೇ ? ''

'' ಹೂ ಪೌರಿ. ಆಗ ತಾನೇ ಸ್ನಾನ ಮುಗಿಸಿದ್ದರು ''

' ಮಗೂ, ಅಪ್ಪ ಎಷ್ಟು ಒಳ್ಳೆಯವರಲ್ಲವೆ ? ಎಲ್ಲ ನಿನ್ನ ಹಾಗೇ ಇದ್ದಾರಲ್ಲವೆ.... ? ''

'' ನೀವು ಬಲ್ಲಿರಾ ಪೌರಿ ಅಪ್ಪನನ್ನು ? ''

'' ಶಂಕರೂ, ಎಂದಾದರೊಂದು ದಿನ, ನಿನಗೆ ನನ್ನ ನೆನಪಾದಾಗ ಅಪ್ಪನಿಗೆ ಹೇಳು ಶಿವೆಯು ಶಿವನಲ್ಲಿ ಐಕ್ಯಳಾದಳೆಂದೂ, ನದಿಯೊಂದು ಸಮುದ್ರದಲ್ಲಿ ಒಂದಾಯಿತೆಂದೂ ...''

'' ಅಪ್ಪನನ್ನು ಕರೆತರಲೆ ಪೌರಿ ? '' ಎಂದೆ ಆಕೆಯು ಏನೊ ನನಗರಿಯಲಸಾಧ್ಯವಾದ ನೋವೊಂದನ್ನು ಅನುಭವಿಸುತ್ತಿದ್ದಳು ' ಕಣ್ಣೀರು ಸುರಿದು ದಿಂಬಿನ ಬದಿಯೆಲ್ಲಾ ಒದ್ದೆಯಾಗಿತ್ತು

'' ಬೇಡ ಶಂಕರೂ, ಅಪ್ಪನನ್ನು ನಿನ್ನಲ್ಲಿ ನೋಡಬಲ್ಲೆ '' ಎಂದು ನನ್ನನ್ನು ಮತ್ತೊಮ್ಮೆ ಗಟ್ಟಿಯಾಗಿ ಅಪ್ಪಿದಳು ಎಷ್ಟು ಹೊತ್ತೋ ಹಾಗೇ ಇದ್ದಳು ದಾದಿ ಬಂದು ನನ್ನನ್ನು ಬಿಡಿಸಿ '' ಮನೆಗೆ ಹೋಗು ಮಗೂ, ಸಂಜೆ ಬರಬೇಡ. ಪೌರಿ ಇರುವುದಿಲ್ಲ'' ಎಂದಳು.

ಅಳುತ್ತಲೇ ಮನೆಗೆ ಹೋದೆ. ನಂತರ ಮೂರು ನಾಲ್ಕು ದಿನ

ಆಕೆಯ ಮನೆಯ ಕಡೆ ಹೋಗಲು ಆಗಲಿಲ್ಲ. ಊರಿಂದ ಅಕ್ಕ ಭಾವ ಬಂದಿದ್ದರು. ಅವರೊಡನೆ, ಸಿನಿಮಾ, ಪಾರ್ಕ್, ಎಗ್ಜಿಬಿಷನ್, ಇವುಗಳ ಸುತ್ತಾಟದಲ್ಲಿ ಕಾಲ ಕಳೆದುಹೋಯಿತು.

ನಾಲ್ಕೈದು ದಿನಗಳ ನಂತರ ಹೋದೆ ಮನೆಗೆ ಬೀಗ ಹಾಕಿತ್ತು. ಮಲ್ಲಿಗೆಯ ಮಂಟಪ ಬಾಡಿತ್ತು. ಶಿವನ ಜಟೆಯ ಗಂಗೆ ಹರಿಯುತ್ತಿರಲಿಲ್ಲ. ತೋಟವೆಲ್ಲ ಬಿಕೋ ಎನ್ನುತ್ತಿತ್ತು. ಆಕೆಯಿರಲಿಲ್ಲ. ಎಲ್ಲಿಗೆ ಹೋದಳೆಂದು ಹೇಳುವವರೂ ಯಾರೂ ಇರಲಿಲ್ಲ. ನನಗೆ ಬಿಕ್ಕಿ ಅಳಬೇಕೆನ್ನಿಸಿತು ತಲೆ ನೋಯುತ್ತಿತ್ತು. ಎಲ್ಲಿಗೂ ಹೋಗದೆ, ಮನೆಗೆ ಬಂದೆ. ಆ ದಿನವೇಕೊ ಅಪ್ಪನ ಬಳಿ ಹೋಗಬೇಕೆನ್ನಿಸಿತ್ತು. ಮೇಲೆ ಹೋಗಿ ಅಪ್ಪನ ಕೋಣೆಯಲ್ಲಿ ಮಂಚದ ಮೇಲೆ ಮಲಗಿದ್ದೇ ನನಗೆ ನೆನಪು... .. ....

ಇಂದಿಗೆ ಏಳೆಂಟು ದಿನಗಳಾಯಿತಂತೆ ನಾನು ಮಲಗಿ, ಟೈಫಾಯಿಡ್ ಜ್ವರವಂತೆ. ಅಪ್ಪನು ಪಕ್ಕದಲ್ಲೇ ಕುಳಿತು, ಹಣೆಗೆ ಒದ್ದೆ ಬಟ್ಟೆ ಹಾಕಿದಂತೆ, ಔಷಧ ಕುಡಿಸಿದಂತೆ, ಎಲ್ಲಾ ಕನಸು ಕಂಡಂತಿತ್ತು ನೆನ್ನೆ ಮೊನ್ನೆ ತಾನೆ ಜ್ವರ ನಾರ್ಮಲ್‌ಗೆ ಇಳಿಯಿತಂತೆ. ಕಣ್ಣು ಬಿಟ್ಟಾಗ ಅಪ್ಪನು ಎದುರು ಕುರ್ಚಿಯಲ್ಲಿ ಕುಳಿತಿದ್ದರು. ಅವರ ಮುಖದಲ್ಲಿನ ಆ ಶಾಂತಿ, ಆ ಸಹನೆ ಸಂಯಮಗಳು ಎಲ್ಲೊ ಕಂಡಂತಿತ್ತು ಹೌದು, ಆಕೆಯಲ್ಲಿ ಅಪ್ಪನ ಮುಖದಲ್ಲಿಯ ಭಾವಗಳನ್ನೆಲ್ಲಾ ಕಂಡಿದ್ದೆ. ಅದೇ ಸೌಜನ್ಯ, ಅದೇ ಕಾಂತಿ, ಆ ಕಣ್ಣಲ್ಲಿ ಅದೇ ದೂರದ ನೋಟ, ತೀರದ ನೋವು ಎಲ್ಲಾ ..............

"ಅಪ್ಪಾ.... !"

"ಏನು ಶಂಕರೂ ... ?"

"ನೀವು ಆಕೆಯನ್ನು ಬಲ್ಲಿರಾ ಅಪ್ಪ ?"

"ಯಾರನ್ನು ಮಗೂ ?"

"ಆಕೆ ಯಾರೋ, ನನಗೂ ತಿಳಿಯದು ಅಪ್ಪಾ.... ಒಂದು ದಿನ ನದೀತೀರದಲ್ಲಿ ಕಂಡೆ. ಆಕೆಯೇ ನನ್ನನ್ನು ಗುರುತಿಸಿದಂತೆ ಕರೆದಳು. ನನ್ನನ್ನು ಕಂಡಾಗ ಹೆಚ್ಚಾಗಿ ಮುದ್ದುಮಾಡಿದಳು. ನೀವು ಕೂಡ ನನ್ನನ್ನು ಎಂದೂ ಅಷ್ಟಾಗಿ ಮುದ್ದುಮಾಡಿರಲಿಲ್ಲ"

" ಹೂಂ . "

" ಆನಂತರ ದಿನವೂ ಅವರ ಮನೆಗೆ ಹೋಗುತ್ತಿದ್ದೆ ಆಕೆ ಬಹಳ ಒಳ್ಳೆಯವಳು ಅಪ್ಪಾ. ನನ್ನನ್ನು ಅಪ್ಪಿದಾಗಲೆಲ್ಲಾ 'ಅದೇ ಕಾಂತಿ, ಅದೇ ಬಣ್ಣ, ಅದೇ ನಗು' ಎಂದು ಹೇಳುತ್ತಿದ್ದಳು. ನನ್ನೊಡನೆ ತೀರ ಚಿಕ್ಕವಳಂತೆ ಆಟ ಆಡುತ್ತಿದ್ದಳು....ಆಕೆಗೆ ಎಷ್ಟು ಕಥೆಗಳು ಬರುತ್ತವೆ ಅಪ್ಪಾ! ಪದ್ಯ, ಪುರಾಣ, ಎಲ್ಲವನ್ನೂ ಹೇಳುತ್ತಿದ್ದಳು "

" ಶಂಕರೂ, ಕನಸೇ ಮಗೂ? " ಅಪ್ಪ ಹಣೆಯ ಬೆವರೊರಿಸುತ್ತಾ ಕೇಳಿದರು

" ಇಲ್ಲ ಅಪ್ಪಾ ಇದೆಲ್ಲವೂ ನಿಜ.... ಎಷ್ಟೊ ಬಾರಿ, 'ಶಂಕರೂ ಅಪ್ಪ ಎಷ್ಟು ಒಳ್ಳೆಯವರು, ಅಪ್ಪ ನಿನ್ನಂತೆಯೇ ಇದ್ದಾರಲ್ಲವೆ" ಎನ್ನುತ್ತಿದ್ದಳು ... .."

ಅಪ್ಪನ ಮುಖವೇಕೋ ತೀರ ವಿವರ್ಣವಾಯಿತು ಹಣೆಯ ಮೇಲೆ ಕೈಯಿಟ್ಟುಕೊಂಡು ತಲೆಬಗ್ಗಿಸಿ ಕೂತರು.

" ಶಂಕರೂ, ಆಕೆ ಎಲ್ಲಿದ್ದಾರೆ?" ಅಪ್ಪನ ಧ್ವನಿ ನಡುಗುತ್ತಿತ್ತು.

" ಏನೋ? ಹತ್ತು ಹನಿನೈದು ದಿನಗಳ ಮುಂಚೆ ಅವರ ಮನೆಗೆ ಹೋಗಿದ್ದೆ. ಜ್ವರ ಬಂದು ಮಲಗಿದ್ದರು. ನಾನು ಹೋದಾಗ "ನಿನಗೇ ಕಾದಿದ್ದೆ ಮಗೂ, " ಎಂದು ನನ್ನನ್ನು ಗಟ್ಟಿಯಾಗಿ ಹೃದಯಕ್ಕೆ ಒತ್ತಿಕೊಂಡರು. ಆಕೆಯ ಜೀವ ತೀರ ಕಂಗೆಟ್ಟಿತ್ತು ...."

" ಶಂಕರೂ, ಮುಂಚೆಯೇ ನನಗೀ ವಿಷಯವೇಕೆ ತಿಳಿಸಲಿಲ್ಲ? "

" ಅಪ್ಪಾ, ಆಕೆಯನ್ನು ಎಷ್ಟೋ ಬಾರಿ ಕೇಳುತ್ತಿದ್ದೆ. . ಅಪ್ಪನನ್ನು ಬಲ್ಲಿರಾ ಮೌಶಿ. ಅಪ್ಪನನ್ನು ಕರೆತರಲೇ ? ಎಂದು.... 'ನಿನ್ನನ್ನು ಕಂಡರೆ ಅಪ್ಪನನ್ನು ಕಂಡ ಹಾಗೇ' ಎನ್ನುವ ವಿಧದಲ್ಲಿ ಮಾತಾಡುತ್ತಿದ್ದರು. "

" ಶಂಕರೂ, ಅವರಿಗೆ ಜ್ವರ ವಾಸಿಯಾಯಿತೆ?"

" ಏನೊ ಅಪ್ಪ. .. ಅಂದು ನಾನು ಹೋದ ದಿನ ತೀವ್ರ ಜ್ವರದಲ್ಲಿದ್ದರು....ಅಕ್ಕ ಭಾವ ಬಂದ ಸಡಗರದಲ್ಲಿ ನಾನು ಮೂರು ದಿನ ಹೋಗಲೇ ಇಲ್ಲ ...ಮತ್ತೆ ಹೋಗುವ ವೇಳೆಗೆ ಮನೆ ಬೀಗ ಹಾಕಿತ್ತು....ಅಪ್ಪಾ...."

"..............."

ಅಪ್ಪ ತಲೆ ಬಗ್ಗಿಸಿ ಕುಳಿತಿದ್ದರು. ಅವರ ಕಣ್ಣೀರೋ ಏನೋ....

ನನ್ನ ಕೈಮೇಲೆ ಬೆಚ್ಚಗೆ ಬಿತ್ತು! ಅಪ್ಪನ ಕಣ್ಣೀರು, ಆಕೆಯ ಕಣ್ಣೀರು ಒಂದೇ ಬಗೆಯಿತ್ತು.

"ಅಪ್ಪಾ, ಆಕೆ ಒಂದೊಂದು ಬಾರಿ ಮಾತಾಡಿದರೆ ಸಮುಸ್ತೈಯಂತ ಇರುತ್ತಿತ್ತು. ಜ್ವರ ಬಂದಾಗ ಹೇಳಿದರು. 'ಶಂಕರೂ ಅಪ್ಪನಿಗೆ ಹೇಳು– ಶಿವೆ ಶಿವನಲ್ಲಿ ನದಿ ಸಮುದ್ರದಲ್ಲಿ ಒಂದಾಯಿತೆಂದು' ಎಂದು. ಏಕಪ್ಪಾ ಹಾಗಿದ್ದೀರಿ? ಆಕೆ ಯಾರು ಅಪ್ಪಾ..? ಆಕೆಯನ್ನು ನೀವು ಬಲ್ಲಿರಾ?"

"ಮಲಗಿಕೊ ಮಗೂ ಆಯಾಸ ಪಡಬೇಡ" ಎಂದರು ಅಪ್ಪ ಕುಗ್ಗಿದ ದನಿಯಲ್ಲಿ.

"ನೀವು ಹೇಳಲೇ ಬೇಕು. ಆಕೆ ಯಾರು ಅಪ್ಪಾ?"

"ಮಗೂ ಮೊನ್ನೆ ತಾನೆ ಜ್ವರವಿಳಿದಿದೆ. ಮಲಗಿಕೊ"

"ಅಪ್ಪ, ಆಕೆ ದೇವತ ಇದ್ದೀತೆ?"

"ಹೂಂ..."

ಅಪ್ಪ ಮಾತಾಡದೆ ಮೌನವಾಗಿದ್ದರು. ಕೋಣೆಯಲ್ಲಿ ಕತ್ತಲು ಮುಚ್ಚಿತ್ತಾದರೂ ಅಪ್ಪ ಎದ್ದು ದೀಪ ಹಾಕಲಿಲ್ಲ.

'ಮಗೂನ ಸುಮ್ಮನೆ ಮಾತಾಡಿಸಬೇಡೀಂದ್ರೆ. ಮಲಗಿಕೊ ಶಂಕರೂ" ಎಂದು ಅಮ್ಮ ಒಳಗಿನಿಂದ ಹೇಳುತ್ತ ನನಗೆ ಹಾರ್ಲಿಕ್ಸ್ ತಯಾರು ಮಾಡುತ್ತಿದ್ದಳು. ಅಮ್ಮ ಹಾರ್ಲಿಕ್ಸ್‌ನೊಡನೆ ಕೋಣೆಯೊಳಗೆ ಬಂದಾಗ, ಇಬ್ಬರೂ ನೀರಸವಾಗಿದ್ದೆವು. ಅಪ್ಪ ಕಣ್ಣೀರು ಹಾಕುತ್ತಿದ್ದರೆಂದು ನನಗ ತಿಳಿದಿತ್ತು. ಯಾರಿಗಾಗಿ? ಆಕೆಗಾಗಿಯೇ? ಆಕೆ ಯಾರು?

"ಇದೇನೂಂದ್ರೆ, ಕತ್ತಲಲ್ಲಿ ಕುಳಿತಿದ್ದೀರಿ! ಶಂಕರೂ ಹಾರ್ಲಿಕ್ಸ್ ಕುಡಿದು ಮಲಗಪ್ಪಾ" ಎಂದು ದೀಪ ಹಚ್ಚಿದರು. ಅಪ್ಪನ ಮುಖ ತೀರ ನಪ್ಪಗಿತ್ತು. ಕೆನ್ನೆಯ ಮೇಲೆ ಹರಿದ ಕಣ್ಣೀರಿನ ಛಾಯೆ ಇನ್ನೂ ಆರಿರಲಿಲ್ಲ. ಅಮ್ಮ ಕೊಟ್ಟ ಹಾರ್ಲಿಕ್ಸ್ ಕುಡಿದು ಮಲಗಿದೆ. ನಿದ್ದೆ ಬಂದಿರಬೇಕು. ....

೪

ಮೇಲಿನ ಸಂಘಟನೆ ನಡೆದು ಹದಿನಾಲ್ಕು ಹದಿನೈದು ವರ್ಷಗಳಾಗಿ ಹೋಯಿತು. ತೀರ ಹೈಸ್ಕೂಲಿನಲ್ಲಿ ಇನ್ನೂ ಆಗಲೇ ಪ್ರವೇಶಿಸಿದ್ದೆ. ಎಳೆ

ವಯಸ್ಸಿನ ನನ್ನಲ್ಲಿ ಆ ಘಟನೆ ಚಿರಸ್ಥಾಯಿಯಾಗಿ ನಿಂತಿತು. ಭಾರತದಲ್ಲಿ ಅನಾದಿಕಾಲದಿಂದ ಬಂದ ಯಾವ ಆಧ್ಯಾತ್ಮಿಕ ಅಭ್ಯಾಸವೂ ಅನೇಕ ಮಹಾಗ್ರಂಥಗಳೂ ಕೊಡಲಾರದ ನೀತಿಯನ್ನು ನನ್ನ ಅನುಭವದಲ್ಲಿ ಕಂಡಿದ್ದೆ. ಆಕೆಯ ಆ ನಿರ್ಮಲಾತ್ಮವೂ, ಸ್ವಾರ್ಥರಹಿತವಾದ ಪ್ರೇಮವೂ, ನನ್ನ ಜೀವನಕ್ಕೆ ಮಾದರಿಯಾಗಿ ನಿಂತಿತು. ಆಕೆಯ ಜೀವನವು ವೇದನಾಪೂರಿತವಾಗಿದ್ದರೂ, ಆಕೆಯಲ್ಲಿ ನೆಲೆಸಿದ್ದ ಶಾಂತಿ–ಸಂಯಮಗಳೇ, ನನ್ನ ನಿತ್ಯ ಜೀವನದ ಮೇಲ್ಪಂಕ್ತಿಯಾಗಿದ್ದವು. ಆಕೆಯನ್ನು ನೆನೆದಾಗಲೆಲ್ಲಾ ಕಣ್ಣಲ್ಲಿ ನೀರೂರುತ್ತಿತ್ತು. ಜೀವನದಲ್ಲಿ ಕೇವಲ ಎಳೆಯ ವಯಸ್ಸಿನಲ್ಲಾದ ಘಟನೆಗಳೂ ಸಹ, ಹೃದಯದಲ್ಲಿ ಚಿರಸ್ಥಾಯಿಯಾಗೇ ನಿಂತು, ನಮ್ಮಲ್ಲಿ ನಮಗರಿವಿಲ್ಲದೆಯೇ ಸಾಕಷ್ಟು ಮಾರ್ಪಾಡನ್ನುಂಟುಮಾಡುತ್ತವೆ. ಅಂದಿನ ಆ ಘಟನೆ, ನನ್ನಲ್ಲಿ ಸಹಾನುಭೂತಿಯನ್ನೂ ಮಾನವತ್ವವನ್ನೂ ತುಂಬಿಸಿದ್ದವು.

ಅಂದಿನ ಅದೇ ಹೂ–ದೋಟ ಅದೇ ಮಲ್ಲಿಕಾಲತಾಮಂಟಪ. ಎದುರಾಗಿ ಶಿವ-ಪಾರ್ವತಿಯರ ವಿಗ್ರಹ ಅಂದಿನಂತೆ ಇಂದೂ ಸಹ ಗಂಗೆ ಶಿವನ ಜಟೆಯಿಂದ ತೊಟ್ಟಿಯಲ್ಲಿ ಹರಿಯುತ್ತಿದ್ದಳು. ಅಂದಿನಂತಹುದೇ ಸುತ್ತಲೂ ಹೂ-ಗಿಡಗಳು. ಸಂಜೆ ಆ ಸಂಜೆಯ ನೆನಪನ್ನೇ ತರುತ್ತಿತ್ತು. ಲತಾಮಂಟಪದಲ್ಲಿ ಕುಳಿತು, ಆಕೆಯನ್ನೂ ಆಕೆಯ ಮತ್ತು ಅಪ್ಪನ ಪರಿಪೂರ್ಣಾತ್ಮ ಸ್ನೇಹಸಂಬಂಧಗಳನ್ನೂ ಕುರಿತು ನೆನೆಯುತ್ತಿದ್ದೆ. ನನ್ನ ಗಿರಿಜೆ ಅಳುತ್ತಿದ್ದ ನಮ್ಮ ಕುಮಾರನನ್ನು ಸಮುದಾಯಿಸುತ್ತಿದ್ದಳು. ಅವಳು ಹರಿಯುತ್ತಿದ್ದ ಗಂಗೆಯನ್ನು ತಡೆಯುತ್ತಾ ಅಡ್ಡವಾಗಿ ಕೈಯಿಟ್ಟಾಗಲ್ಲೆಲ್ಲಾ ಸುತ್ತಲೂ ಚಿಮ್ಮುತ್ತಿದ್ದ ನೀರನ್ನು ನೋಡಿ, ಅಳುವನ್ನು ನಿಲ್ಲಿಸಿ ಕುಮಾರನು ಕೇಕೆ ಹಾಕುತ್ತಿದ್ದನು ಗಿರಿಜೆ, ಆ ತನ್ಮಯತೆಯಲ್ಲಿ ಅಪೂರ್ವಸುಂದರಿಯಾಗಿ ಕಾಣುತ್ತಿದ್ದಳು ಅಂದು ಸ್ವಲ್ಪ ತಂಪುಗಾಳಿ ಬೀಸುತ್ತಿತ್ತೆಂದು ಗಿರಿಜೆ ತಾನೇ ಹೆಣೆದ ವೂಲಿನ ಅಂಗಿಯನ್ನು ಮಗುವಿಗೆ ತೊಡಿಸಿದ್ದಳು. ಕುಮಾರನು, ಇನ್ನೂ ಹೊಟ್ಟೆಯಲ್ಲಿರುವಾಗಲೇ ಗಿರಿಜೆ "ವೂಲು ತಂದುಕೊಡೀಂದ್ರೆ... ಒಳ್ಳೆಯದ ನೋಡಿ ತರಬೇಕು ನೋಡಿ...." ಎಂದು ಚಡಪಡಿಸಿದ್ದಳು. ರಾತ್ರಿಹಗಲೆನ್ನದೆ ಕುಳಿತು ಬರಲಿರುವ ಮಗುವಿಗೆಂದು ಅಂಗಿಯನ್ನೂ ಹೆಣೆದಿದ್ದಳು.

ಹೆಣ್ಣಿನಲ್ಲಿಯ ತಾಯ್ತನದ ಶ್ರೇಷ್ಠತೆ, ನನ್ನನ್ನು ನಡುಗಿಸುತ್ತಿತ್ತು, ತಲೆ ಬಾಗುವಂತೆ ಮಾಡುತ್ತಿತ್ತು.... ಪಾಪ.... ಆಕೆ, ನನ್ನನ್ನು ತನ್ನ ಮಗುವಿನಂತೆಯೇ ತಿಳಿದು, ನನಗಾಗಿ ಹೆಣೆದಿದ್ದಳು ಆ ವೂಲಿನ ಅಂಗಿಗಳನ್ನು. ಯಾವ ಕಾರಣದಿಂದಲೋ, ಅವು ನನಗೆ ಸೇರಲಿಲ್ಲ. ..... ಆಕೆಯಲ್ಲೇ ನಿಂತಿತು. ಆಕೆಯಲ್ಲಿಯ ಆ ತಾಯ್ತನ ಎಷ್ಟು ಮರುಗಿತೋ ಪಾಪ! ಸಂಘದ ಎಲ್ಲೆಗಳನ್ನು ಮೀರಲಾರದೆ ಎಷ್ಟು ನೊಂದಳೂ?.... ನನಗೆ ಆ ನೆನಪಿನಲ್ಲಿ ಕಣ್ಣಲ್ಲಿ ನೀರು ಚಿಮ್ಮಿತು.

ಗಿರಿಜೆ ಮಗುವನ್ನೆತ್ತಿಕೊಂಡು ನನ್ನೆಡೆಗೇ ಬರುತ್ತಿದ್ದಳು. ನನ್ನ ಲೇಖನಸಾಮಗ್ರಿಗಳೂ, ಹಾಳೆ ಕಾಗದಗಳೂ, ನನ್ನ ಸುತ್ತಲೂ ಚೆಲ್ಲಾಪಿಲ್ಲಿಯಾಗಿ ಬಿದ್ದುದನ್ನು ನೋಡಿ ನಗುತ್ತಲೇ ಬಂದಳು

" ಏನು... ಇದು ಕವಿಗಳ ಕಣ್ಣಲ್ಲಿ ನೀರು! ಪರಧ್ಯಾನದಲ್ಲಿ ಕಾಗದಗಳು ಗಾಳಿಗೆ ಹಾರಿ ಹೋಗುತ್ತಿರುವುದೂ ಗಮನಿಸಲಿಲ್ಲ! ಯಾವ ಕಥಾನಾಯಕಿ ಇಂದು ತನ್ನ ವಶಮಾಡಿಕೊಂಡಿದ್ದಾಳೆ, ನನ್ನ ಕವಿಯನ್ನು ? " ಎಂದು ನನ್ನ ಒಡಲಲ್ಲಿ ಕುಮಾರನನ್ನು ಕೂರಿಸಿ, ಎನ್ನ ಎದುರಿಗೇ ಇದ್ದ ಕುರ್ಚಿಯಲ್ಲಿ ತಾನು ಕೂತಳು.

" ನೋಡು ಗಿರಿಜೆ, 'ಆಕೆ'ಯ ನೆನಪು ಬಂತು. ಅಂತೇ ಕಣ್ಣಲ್ಲಿ ನೀರೂರಿತು. "

" ನಿಜವಾಗಿ, 'ಆಕೆ' ನಿಮ್ಮಲ್ಲಿ ಎಂತಹ ಸ್ಥಾನವನ್ನು ಆಕ್ರಮಿಸಿದ್ದಾಳೆ! ಆಕೆಯು ಬದುಕಿದ್ದುದೇ ಆದರೆ, ನಾನಂತೂ ನಿಜವಾಗಿ ಹೊಟ್ಟೆಕಿಚ್ಚಿಗೆ ತುತ್ತಾಗುತ್ತಿದ್ದೆ ! "

" ಎಂತಹ ಮಾತು ಗಿರಿಜಾ ! ನಿಷ್ಕಳಂಕವಾದ ಪ್ರೀತಿ ಸಹಾನುಭೂತಿಯೆಲ್ಲಾ ಆಕೆಯಲ್ಲಿ ಮೂರ್ತೀಭವಿಸಿತ್ತು. ಅಪ್ಪ ಹೇಳಿದ ಹಾಗೆ, ಆಕೆ ದೇವತೆ....! " ಇಷ್ಟರಲ್ಲೇ, ತನ್ನನ್ನಾರೂ ಗಮನಿಸಲಿಲ್ಲವೆಂದೋ ಏನೋ, ಕುಮಾರನು ಅಳಲು ಶುರು ಮಾಡಿದನು. " ತೆಗೆದುಕೋ ಗಿರಿಜೆ.... ನಿನ್ನ ಮಗನನ್ನ, ಅಳಬುರುಕ !" ಎಂದೆ.

" ಅತ್ತರೆ ನನ್ನ ಮಗ ! ನಕ್ಕಾಗ ನಿಮ್ಮ ಮಗ. ಎಂತಹ ಜಾಣರು ನೀವು !.... ಅದಿರಲಿ.... ನೋಡೀಂದ್ರೆ, ನೆನ್ನೆ ನಿಮ್ಮ ಹೊಸ ಕಥೆಗಳನ್ನು ಓದಿದೆ.... ದಿನವೂ ನಾವಿಬ್ಬರೂ ಆಡಿಕೊಳ್ಳುವ ಮಾತನ್ನೆಲ್ಲಾ, ಅದರಲ್ಲಿ

ಇಳಿಸಿದ್ದೀರಿ! ಸಾಲದ್ದಕ್ಕೆ, ''ಕುಮಾರಸಂಭವ''ವೆಂದೇ ಕಥೆಯ ಹೆಸರೂ ಸಹ.... ಕವಿಪತ್ನಿಯಾಗಿರುವುದೂ 'ಆಚಾರಿ'ಯ ಹೆಂಡತಿಯಾಗಿರುವುದೂ ಎರಡೂ ಅಷ್ಟೇ ಕಷ್ಟ ! ಏನು ಮಾಡಿದರೂ........''

'' ಹೌದಲ್ಲವೆ, ಗಿರಿಜಾ ನಿಜಜೀವನದ ಪ್ರತಿಬಿಂಬವೇ ಆಗಿರಬೇಕಲ್ಲವೆ ಕವಿಯ ಸೃಷ್ಟಿ ? ನೀನೇ ಹೇಳು, ಎಷ್ಟು ಜನರಿಗಿದ್ದೀತು, ನಮ್ಮ ಈ ಸಮರಸದ ಅನುಕೂಲದಾಂಪತ್ಯ ? ಹಾಗಿಲ್ಲದೆ ಇರುವವರೆಲ್ಲಾ ನನ್ನ ಕಥೆಯನ್ನೋದುವ ವೇಳೆಯಾದರೂ ಭಾವನಾಪ್ರಪಂಚದಲ್ಲಿ ಆ ಸುಖವನ್ನು ಅನುಭವಿಸಿ ಆನಂದಿಸಿದ್ದೇ ಆದರೆ, ಆ ಕವಿಯ ಬಾಳು ಧನ್ಯವಾಯಿತಲ್ಲವೆ ? ನಿಜಜೀವನದ ನೋವನ್ನು ಕ್ಷಣಕಾಲವಾದರೂ ಮರೆಯಿಸಿ ಓದುಗನಲ್ಲಿ ಆನಂದವನ್ನು ಹುಟ್ಟಿಸಬಲ್ಲ ಕವಿಯೇ, ನಿಜವಾದ ಕವಿಯಲ್ಲವೆ....? ''

'' ಸರಿ,.... ಹಾಗೆಂದು ನಾನೂ, ನೀವೂ ಹೇಳಿಕೊಂಡ ಮಾತೆಲ್ಲಾ .... . ....''

'' ಹೂಂ ಮತ್ತೆ! ಕವಿಯು ತನ್ನ ಅನುಭವದ ಮೇಲೆ ಬರೆದರೇನೇ ರಚನೆಗೊಂದು ಸೊಬಗು. ಸವಿ, ಆವರಣ ...''

'' ನೋಡೀಂದ್ರೆ ... ಪಾಪ .. ಕುಮಾರನು, ತನ್ನನ್ನು ಯಾರೂ ಮಾತಾಡಿಸುತ್ತಿಲ್ಲವೆಂದು ಹೇಗೆ ಸಪ್ಪಗಿದ್ದಾನೆ . ''

'' ಇರು ಗಿರಿಜಾ.... ಹೂ ಬಿದ್ದುಹೋಗುತ್ತಿದೆ ... '' ಎಂದವಳ ತುರುಬಿನಲ್ಲಿ ಹೂವನ್ನು ಸರಿಮಾಡಿ, ಅವಳ ಕೆನ್ನೆಯನ್ನು ನೇವರಿಸಿದೆ ...

'' ಥೂ, ಹೋಗೀಂದ್ರೆ ! ನೀವು ಯಾವಾಗಲೂ ಹೀಗೆ! ಇವನನ್ನು ನೋಡಿ.... ಹೇಗೆ ನಗುತ್ತಾನೆ ! ''

'' ಏಕೆ ? ಅಪ್ಪ, ಅಮ್ಮ ವಿನೋದವಾಗಿದ್ದಾರೆಂದೇ ? ಈಗಾಗಲೇ ಅವನಿಗೆ ತಿಳಿಯಿತೇ ? ''

'' ಏಕಾಗಬಾರದು ? ನಿಮ್ಮ ಮಗನಲ್ಲವೆ ? ತೀರ ಹದಿನೈದನೆಯ ವರ್ಷದಲ್ಲಿಯೇ ಶಕುಂತಲೆಯಂತಹ ಹೆಣ್ಣು ತನ್ನ ಭಾವೀ ಜೀವಿತದಲ್ಲಿ ಹೆಂಡತಿಯಾಗಬೇಕೆಂದು ಬಯಸಿದವರು ! ಅಂತಹ ರಸಕವಿಗಳ ಮಗನಲ್ಲವೇ ? ''

'' ಹೋಡು ಗಿರಿಜಾ, ನನ್ನನ್ನು ಮಾತ್ರವೇ ಅನ್ನುತ್ತೀ ! ಹೇಳಲೀ

ನಿನ್ನ ರಸಿಕತ್ವ ? '' ಎಂದವಳ ಕೈ ಹಿಡಿದೆ....

'' ಥೂ, ಬಿಡೀಂದ್ರೆ!.... ಓ.... ಮರೆತೇ ಬಿಟ್ಟಿದ್ದೆ... ನೋಡಿ.... ನಿಮಗೆ ಕಾಫಿಗಾಗಿ ಒಲೆಯ ಮೇಲೆ ಹಾಲಿಟ್ಟು ಬಂದೆ. ಮರೆತೇ ಹೋಯ್ತು.... ನಿಮ್ಮ ಜತೆಯಲ್ಲಿದ್ದರೆ ಎಲ್ಲವೂ ಮರೆತು ಬಿಡುತ್ತೇನೆ, ನಿಮ್ಮಲ್ಲಿರುವ ಶಕ್ತಿ ಅದೇನೋ, ಆಗಲಿ ...''

'' ಹೌದೆ ಗಿರಿಜಾ, ಕುಮಾರನನ್ನೂ ಮರೆಯಬಲ್ಲೆಯಾ? ''

'' ಹೌದನ್ನಲೆ....? '' ಎಂದು ಮಗುವನ್ನು ನನ್ನ ಕೈಲಿ ಕೊಟ್ಟು ''ಸ್ವಲ್ಪ ಮಗುವನ್ನು ನೋಡಿಕೊಳ್ಳಿ, ಈಗ ಕಾಫಿ ತರುತ್ತೇನೆ'' ಎಂದು ಒಳಗೆ ಹೋದಳು.

ಕುಮಾರನನ್ನು ಮುದ್ದಿಡುತ್ತಾ, ಕಾಫಿಯೊಡನೆ ಬರುವ ನನ್ನ ಗಿರಿಜೆಗಾಗಿ ಕಾದು ಕುಳಿತೆ. ಮನಸ್ಸು, ಹೃದಯ ಉಲ್ಲಾಸದಲ್ಲಿತ್ತು. ಸಂಜೆ ಪ್ರಶಾಂತವಾಗಿತ್ತು. ಸೂರ್ಯನು ಹಿಂದಾಗಿ, ಚಂದ್ರನು ಏರಿ ಬರುತ್ತಿದ್ದನು. ಅಂದು 'ಆಕೆ'ಯ ಬದಿಯಲ್ಲಿ ಕುಳಿತು ನಾನನುಭವಿಸಿದ್ದ ಶಾಂತಿ ಸಂಯಮಗಳೇ, ಇಂದೂ ನನ್ನವಾಗಿದ್ದವು.

---

# ತೌರಿನಲ್ಲಿ ಒಂದು ವಾರ ‡ ‡ ‡

೧

## ಮುಂಜಾನೆ ಐದು ಘಂಟೆಗೆ

" ಏನ್ರೀ, ಕಾಫಿ ತೆಗೆದುಕೊಳ್ಳುತ್ತೀರೋ ? ಓಹೊ ! ಅದೇನು ನಿದ್ದೇನ್ರೀ? " ಎಂದು ನಮ್ಮವರು ಹೊದೆದ ಕಾನ್ಪೂರ್ ಕಂಬಳಿಯನ್ನು ಒಂದಿಷ್ಟು ಬದಿಗೆ ಮಾಡಿ, ಸುಖನಿದ್ರೆಯಲ್ಲಿ ನಸುನಗುತ್ತಿದ್ದ ನಮ್ಮವರನ್ನು ಎಚ್ಚರಿಸಿದೆ.

" ಹೂsss ... ಏನೇ ಸೀತೇ ......." ಎಂದು ಕಣ್ಮುಚ್ಚಿಕೊಂಡೇ ಬದಿಗೆ ತಿರುಗಿದರು, ಮುಸುಗೆಳೆದುಕೊಳ್ಳುತ್ತಾ.

" ಕಾಫಿರೀ, ಕುಡಿದು ಮಲಗಿಬಿಡಿ. ಏಳು ಗಂಟೆತನಕ ನಿಮ್ಮ ಸುದ್ದಿಗೇ ಬರುವುದಿಲ್ಲ." ಎಂದೆ ಮತ್ತೆ ಅವರ ಹಣೆಯ ಮೇಲೆ ಕೈಯಾಡಿಸುತ್ತಾ.

ಇನ್ನು ಏಳಲೇಬೇಕಾಯಿತು ಅವರು. ಕಣ್ಣುಜ್ಜಿಕೊಳ್ಳುತ್ತಾ, ಆಕಳಿಸುತ್ತಾ, ಎದ್ದು ಅರ್ಧ ಕೂತು, ನನ್ನ ಕೈಯಲ್ಲಿದ್ದ ಕಾಫಿಯನ್ನು ತೆಗೆದುಕೊಂಡು 'ಸಿಪ್' ಮಾಡುತ್ತಾ "ಬಲೆ ಚೆನ್ನಾಗಿದೆ ಕಣೆ ಸೀತೆ, ಕಾಫಿ ! ನಿನ್ನ ಕೈ ಅಮೃತಾನೇ ! ಗಂಟೆ ಎಷ್ಟಾಯಿತು ?" ಎಂದರು.

" ಐದು, ಐದೂವರೆ ಇದ್ದೀತು. ರೀ, ನೋಡ್ರೀ, ಹೊರಗಡೆ ಎಷ್ಟು ಚೆನ್ನಾಗಿದೇಂತೆ ! ಮುಂಜಾನೆ ನಸುಕು, ಆಗಸದಲ್ಲಿಯ ಆ ನಸುಗೆಂಪು, ತಂಗಾಳಿ........"

" ಇಲ್ಲಿ ನೀನೂ, ನಿನ್ನ ಕವಿದೃಷ್ಟಿಯೂ, ಈ ಬಿಸಿ ಕಾಫಿಯೂ...."

" ಥೂ, ಹೋಗೀಂದ್ರೆ! ನೀವು ಯಾವಾಗಲೂ ಹೀಗೇನೇ ! ಇನ್ನು ಮಲಗಿ, ನಾನು ಹೋಗುತ್ತೇನೆ. " ಎಂದೆ, ಅವರು ಕುಡಿದು ಮುಗಿಸಿದ ಕಾಫೀ ಬಟ್ಟಲನ್ನು ತೆಗೆದುಕೊಳ್ಳುತ್ತಾ.

" ಏ ಸೀತೇ, ಸ್ವಲ್ಪ ರಗ್ಗು ಸರಿಯಾಗಿ ಹೊದಿಸಿ ಹೋಗು. "

" ಹೂಂ ಸರಿ," ... ರಗ್ಗನ್ನು ಸರಿಯಾಗಿ ಮೈತುಂಬ ಹೊದಿಸಿ ಹೊರಡಲನುವಾದೆ.

" ಸೀತೆ.... " ಎಂದರು ಮುಸುಗಿನಿಂದಲೇ.

" ಏನು....? " ಎಂದೆ ಹಿಂದಿರುಗಿ.

" ನೋಡು, ಆ ಕಿಟಿಕಿ ಬಾಗಿಲು ಮುಚ್ಚಿಹೋಗು. ನಿನಗೆ ಬಹಳ 'ಥ್ಯಾಂಕ್ಸ್' ಕಣೆ. "

"ಓ ! ಒಂದಿಷ್ಟು ಸೂರ್ಯ ರಶ್ಮಿ ಬಿದ್ದರೆ, ನಿಮ್ಮ ಚಿನ್ನದ ಮೈಬಣ್ಣ ಕಪ್ಪಾದೀತೆಂಬ ಹೆದರಿಕೆಯೇನೋ ! ಆ ಮೈಬಣ್ಣದ ಕಾಂತಿಯು ಪ್ರಸಾರ ನನ್ನೊಬ್ಬಳ ಮೇಲೆ ಸಾಲದೇನೋ! " ಎಂದೆ ನಗುತ್ತಾ.

" ತುಂಟ ಹುಡುಗಿ?....ಹೋಗು, ಹರಟಬೇಡ. "

" ಹೂಂ....ಮಲಗಿ, ಪಾಪ ...ಆಮೇಲೆ ಮಧ್ಯಾಹ್ನ ಜಡ್ಜಿ ಎದುರಿಗೇ ನಿದ್ದೆ ಮಾಡಿರಿ ! "

* * * *

## ಬೆಳಿಗ್ಗೆ ಏಳು ಘಂಟೆಗೆ

" ಅಡಿಗೆ ಮನೆಯ ಕೆಲಸದಲ್ಲಿದ್ದೆ ಪಲ್ಯಕ್ಕೆ ಒಗ್ಗರಣೆ ಹಾಕಿ,ಕಾಯ್ದಿ ದಿಬ್ಬುಕೊಂಡಿದ್ದ ಕೋಸನ್ನು ಒಗ್ಗರಣೆಯೊಳಗೆ ಹಾಕುತ್ತಿದ್ದೆ.

"ಸೀತೆ," ಎಂದು ನಮ್ಮವರ ಧ್ವನಿ ಮಹಡಿಯ ಮೇಲಿಂದ ಬಂದು ನನ್ನನ್ನು ಎಚ್ಚರಿಸಿತು.

" ಏನಾಯಿತು ? ಪಲ್ಯ ಸೀದುಹೋಗುತ್ತೇಂದ್ರೆ ! ಈಗ ಬರಲಿಕ್ಕಿಲ್ಲ " ಎಂದು ಅಲ್ಲಿಂದಲೇ ಪ್ರತ್ಯುತ್ತರವಿತ್ತೆ.

" ವುಹೂಂ, ಬರಲೇಬೇಕು ! ವಿಪರೀತ ಅರ್ಜೆಂಟ್ ಕೆಲಸ.... ಬಾ ಸೀತೇ. "

" ಏನಾಯಿತು ಅವಾಂತರ ? " ಎಂದುಕೊಂಡು ಮಹಡಿಯ ಮೇಲಕ್ಕೆ ಹೋದೆ. ನಮ್ಮವರು ಏನನ್ನೊ ಹುಡುಕುತ್ತ ಚಡಪಡಿಸುತ್ತಿದ್ದರು. ಅವರ ಆ ಅವಾಂತರದ ನೋಟಕ್ಕೆ ನನಗೆ ನಗು ಬಂದಿತು.

" ನಗುತ್ತೀಯ ನೀನು!....ನೋಡೆ ಸೀತೆ, ನಿನ್ನನ್ನು ಕರೆಯದೆಯೇ, ನಿನ್ನ ಸಹಾಯವಿಲ್ಲದೆಯೇ, ನನ್ನ ಕೆಲಸ ಮಾಡಿಕೊಳ್ಳೋಣವೆಂದು ಆಗಲಿಂದ ಪ್ರಯತ್ನ ಮಾಡಿದೆನಾಗಲಿ .. .... ಉಹು ....... ಗಾಂಧೀಜೀ ಮತ್ತು ರಾಜಾಜಿಯವರ 'Depend on yourself' ತತ್ವ, ನನ್ನಲ್ಲಿ ಸಾಗುವ ಹಾಗೇ ಇಲ್ಲ." ಎಂದರು ಸಿಗರೇಟ್ ಹೊತ್ತಿಸುತ್ತಾ.

" ಸರಿ! ಇಷ್ಟಕ್ಕೂ ಆ ಪೀಠಿಕೆಯೆಲ್ಲ ಏನೆಂದು ? "

" ಏನಿಲ್ಲ ನೋಡು, ನನ್ನ 'ರೇಜರ್' ಸಿಕ್ಕಲಿಲ್ಲ." ಎಂದರು ನಿಧಾನ ವಾಗಿ, ಸಿಗರೇಟಿನ ಹೊಗೆಯಲ್ಲಿ ಮಗ್ನರಾದಂತೆ.

" ಅಯ್ಯೋ ರಾಮಾ! ಇಷ್ಟೇನೇ! ಇನ್ನೇನಾಯಿತೋಂತ ಓಡಿಬಂದೆ. ಪಲ್ಯ ಸೀದುಹೋಗುತ್ತೆ" ಎಂದು ಹೊರಡಲನುವಾದೆ

" ಏ ಸೀತೆ... ಅವಾಂತರವಲ್ಲದೆ ಮತ್ತೇನು ? ಈಗಾಗಲೇ ಗಂಟೆ ಏಳಾಯಿತು. 'ರೇಜರ್' ಸಿಕ್ಕಿದ ಹೊರತು ನನ್ನ ಕೆಲಸ ಮುಂದರಿಯುವ ಹಾಗೇ ಇಲ್ಲ. ಎಂಟು ಗಂಟೆಗೆಲ್ಲಾ ಕಕ್ಷಿದಾರರು ಬರುತ್ತಾರೆ. ಸ್ವಲ್ಪ ಎಲ್ಲಿದೆಯೊ, ಆ 'ರೇಜರ್' ಹುಡುಕಿಕೊಟ್ಟು ಹೋಗೇ. "

" ಅದೇಕೆ ಹಾಗೆ, ಎಲ್ಲೆಲ್ಲಿ ಇಟ್ಟು ಹುಡುಕಾಡುವುದು ? ನಿಮ್ಮ ಲ್ಲಿಗೆ ನಾನು ಬರಲು ಮುಂಚೆ, ಏನು ಮಾಡುತ್ತಿದ್ದಿರಿ ? ಆಗೇನೂ ಗಡ್ಡ ಬೆಳಸಿರಲಿಲ್ಲವಲ್ಲ ? ಇನ್ನೂ ಆಗಲೇ ಚೆನ್ನಾಗಿ, ಫ್ರೆಶ್ (Fresh) ಆಗಿ ಕಾಣುತ್ತಿದ್ದಿರಿ. "

" ಆಗೆಲ್ಲ ನಾನೇ ಜಾಗ್ರತೆಯಾಗಿ ಇಟ್ಟುಕೊಳ್ಳುತ್ತಿದ್ದೆ ಈಗೆಲ್ಲ ಈ ಮಹಾರಾಣಿಯ ದರ್ಬಾರ್! "

" ಇದೀಗ ಚೆನ್ನಾಯ್ತು! ನಾನು ಹೋಗ್ತೇನೆ. ನನಗಿನ್ನೂ ಕೆಲಸ ವಿದೆ. "

" ಮತ್ತೆ ನಾನು 'ಷೇವ್' ಮಾಡಿಕೊಳ್ಳಬೇಡವೇನೇ ಸೀತೇ?"

" ಅರೆ! ಬೇಡವೆಂದವರು ಯಾರು? ಮಾಡಿಕೊಳ್ಳಿ "

" ಯಾರೇ ನಿನ್ನಂತಹ ಪುಣ್ಯಾತಗಿತ್ತಿ ರಾತ್ರಿಯಲ್ಲಿ ರಾಮಾಯಣ ಕೇಳಿ, ರಾಮನಿಗೆ ಸೀತೆ ಏನಾಗಬೇಕೂಂದಳಂತೆ. 'ರೇಜರ್' ಸಿಕ್ಕಲಿಲ್ಲ ವೆಂದು ಹೇಳಿದೆನಲ್ಲವೆ. ದಯವಿಟ್ಟು ಹುಡುಕಿಕೊಡು ಎಂದು ಪ್ರಾರ್ಥಿಸು ತ್ತೇನೆ. " ಎಂದರು ಸಿಗರೇಟ್ ತುಂಡನ್ನು ಬೀಸಾಡುತ್ತಾ. "ಓಹೋ !

ಹಾಗೆ ಬನ್ನಿ ದಾರಿಗೆ....ಅದಲ್ಲಾಂದ್ರೆ ಪವಿತ್ರವಾದ ರಾಮಾಯಣ,ಅಪವಿತ್ರ ವಾದ 'ರೇಜರ್'.... ಏನೋದ್ರೆ ನಿಮ್ಮ ಸಾಮ್ಯಗಳು.... ಚೆನ್ನಾಯಿತು ..." ಎಂದು ರೇಜರನ್ನು ಹುಡುಕಿಕೊಟ್ಟು, "ಸ್ನಾನಕ್ಕೆ ದಯಮಾಡಿಸ ಬಹುದು ರಾಯರು " ಎಂದು ಕೆಳಗಿಳಿದು ಬಂದೆ.

* * * *

**ಹತ್ತು ಘಂಟೆಗೆ**

"ಊಟಕ್ಕೇಳ್ತೀರೇನ್ರೀ ? ಆಮೇಲೆ ಅವಸರದಲ್ಲಿ ಊಟವೇ ಸರಿ ಯಾಗಿ ಮಾಡುವುದಿಲ್ಲ. ಹಸಿದವನಿಗೆ ಮುನಿಸು ಹೆಚ್ಚಂತೆ. ಅದರಲ್ಲೂ ಗಂಡಸಿನ ಸಿಟ್ಟಂತೂ........"

"ಹೆಣ್ಣಿಂದೊ ? " ಎಂದರು ನಮ್ಮವರು ಊಟಕ್ಕೆ ಕುಳಿತು ಕೊಳ್ಳುತ್ತಾ.

"ಹೆಣ್ಣಿನ ಸಿಟ್ಟು ಕೇಳುವವರು ಯಾರು ಹೇಳಿ ? ಈಗ ನೋಡಿ, ಬೆಳಿಗ್ಗೆಯಿಂದ,ಎಷ್ಟು ಸಲ ಕರೆದಿದ್ದೀರಿ! ಕರೆದಾಗಲೆಲ್ಲಾ ಬರದೇ ಇದ್ದರೆ, ಸಿಟ್ಟು ಬರಲಿಕ್ಕಾಯಿತಲ್ಲವೇ? 'ರೇಜರ್'ಗೆಂದು,ಸ್ನಾನಕ್ಕೆ ಹೋದಾಗ,.... ಹೀಗೇ.... ಇನ್ನೂ ಎಲ್ಲಕ್ಕೂ.... ಕೋರ್ಟಿನಲ್ಲಾದರೂ 'ಸೀತೆ' ಎನ್ನದೆ ಅದು ಹೇಗೆ ಇರುತ್ತೀರೋ ಪಾಪ! "

"ನೋಡು ಸೀತೆ, ದೇವೀ ಔಪಾಸಕರೆಲ್ಲ ದೇವಿಗೆ ಅರ್ಚನೆ ಮಾಡು ವಾಗ, ದೇವೀಸಹಸ್ರನಾಮ, ಅಷ್ಟೋತ್ತರ ಹೇಳುವರಲ್ಲವೆ.... ಹಾಗೇ ನಾನು. ನೀನು ನನ್ನ ದೇವಿ, ನಿನ್ನ ಔಪಾಸಕ ನಾನು."

"ಓಹೋ ! ಇದು ಬೇರೆ ಮಧ್ಯೆ. ರೇಜರ್ ಹುಡುಕಲು ಕರೆ ಯುವುದು, ರಗ್ಗು ಹೊದೆಸಲು ಕರೆಯುವುದು, ಅದೆಂತಹ ಪೂಜೇನ್ರೀ?"

"ಮತ್ತೇನೆಂದುಕೊಂಡೆ ಹುಚ್ಚೀ, ಸುಖದಾಂಪತ್ಯದ ಐಕ್ಯತೆ ಯಲ್ಲಿಯ ಪ್ರೀತಿಯ ಪೂಜೆ ಅದು. ತಿಳಿಯಿತೇ ? "

"ಈ ದಿನವೇನು, ರಾಯರ ಧೋರಣೆ, ಸ್ವಲ್ಪ ಜೋರಾಗಿದೆ. ಯಾವನೋ ಪಾಪ, ತಲೆಮಾಸಿದ ಹಳ್ಳಿಗ, ಕೈತುಂಬಾ 'ಫೀಜ' ಕೊಟ್ಟು ಹೋದನೇನೋ. ಮಾತಿನಲ್ಲಿ ಊಟ ಮರೆತೀರಿ! ತಾರೆಟ್ ಕೋಸಂಬರಿ

ತಿನ್ನಿ ಮೈಗೆ ಒಳ್ಳೆಯದು.... ಇನ್ನು ಸ್ವಲ್ಪ ಮೊಸರು ಬಡಿಸಲೇ ? ನೀವು ಕೈತೊಳೆಯುವಷ್ಟರಲ್ಲಿ ತಾಂಬೂಲ ತಯಾರು ಮಾಡ್ತೀನಿ "....

ಎಲ್ಲಾ ಆಯಿತು ನಮ್ಮವರು ಕೋರ್ಟಿಗೆ ಹೊರಡಲನುವಾದರು. ಎಂದಿನ ಅಭ್ಯಾಸದಂತೆ. ನಾನೂ ಅವರೊಟ್ಟಿಗೇ ಬಾಗಿಲತನಕ ಹೋಗಿ ನಿಂತೆ. ಅಷ್ಟು ದೂರ, ಗೇಟಿನ ತನಕ ಹೋದವರು "ಸೀತೇ!" ಎಂದು ಅಲ್ಲೇ ನಿಂತರು.

" ಇನ್ನೂ ಸೀತೇನೆ ಬಿಡಿಲಿಲ್ಲಾಂದ್ರೆ "ಎಂದು ನಗುತ್ತಲೇ ಮುಂದೆ ಹೋಗಿ " ಏನೂ ? " ಎಂದೆ

" ಸಾರಿ (Sorry) ಸೀತೆ ! ಮಹಡಿಯ ಮೇಲೆ, ನನ್ನ ಮೇಜಿನ ಮೇಲೆ, ಪ್ಲೈಂಟ್ (Plaint) ಇಟ್ಟು ಮರೆತುಬಿಟ್ಟೆ. ಸ್ವಲ್ಪ ತಂದು ಕೊಡುತ್ತಿಯಾ ? "

ಅಂತೂ ನಮ್ಮವರು ಹೊರಟರು ಕೋರ್ಟಿಗೆ........ ಇದು ನನ್ನ ದಿನಚರಿಯೇ ಆಗಿತ್ತು.

ನನಗೆ ಮದುವೆಯಾಗಿ ಮೂರು ವರ್ಷಗಳಾಗುತ್ತ ಬಂದಿತ್ತು. ಮೂರು ವರ್ಷಗಳೂ ನಮ್ಮವರೊಡನೆ, ಮೂರು ನಿಮಿಷಗಳಂತೆ ಕಳೆದು ಹೋಗಿತ್ತು. ನಾನು ಅವರನ್ನು ಮದುವೆಯಾಗುವುದು, ನನ್ನ ತಂದೆ ತಾಯಿಗಳಿಗೆ ಅಷ್ಟೊಂದು ಹಿತವಿಲ್ಲದಿದ್ದರೂ, ನನ್ನ ಹಟಮಾರಿತನಕ್ಕೆ ಬಗ್ಗಿದ್ದರು ತಮ್ಮ ಮಗಳು, ಯಾರೊಬ್ಬ ಕಲೆಕ್ಟರನ್ನು ಮದುವೆಯಾಗಿ, ದೊಡ್ಡ ಬಂಗಲೆ, ಕಾರು, ಆಳು, ಕಾಳು, ಈ ಆಡಂಬರದ ಜೀವನವನ್ನು ಅಪ್ಪಬೇಕೆಂದು ನನ್ನ ತಾಯಿತಂದೆಗಳ ಆಶೆಯಿತ್ತು. ಆದರೆ ನನ್ನ ಧ್ಯೇಯವೇ ಬೇರೆಯಾಗಿತ್ತು. ನಾನೊಲಿದು, ನನ್ನೊಲಿದ ನಮ್ಮವರನ್ನೇ ಮದುವೆಯಾಗಿ ಸುಂದರ ಬಾಳನ್ನಪ್ಪಬೇಕೆಂಬುದೇ ನನ್ನ ಆಶಯ ವಾಗಿತ್ತು. ಅಂತೇ, ನನ್ನ ಹಟಯೋಗದಲ್ಲಿ ಗೆದ್ದು "ಅವರ"ನ್ನೆ ಮದುವೆ ಯಾದೆ ಮದುವೆಗೆ ಮುಂಚೆ, 'ಅವರು' ನನಗೂ ಸಹ 'ರಘು'ವೇ ಆಗಿ ದ್ದರು. ಅದೇನೋ ಆಗಲಿ, ಮದುವೆಯಾದನಂತರ "ಅವರು" ಆದರು. ಎಲ್ಲ ಹೆಣ್ಣುಮಕ್ಕಳಿಗೂ ಹೇಗೆ ಇರುತ್ತದೋ ! ಆಗಲಿ, ನನಗಂತೂ ಅವರನ್ನು ಹೆಸರಿಟ್ಟು ಕರೆಯುಲು ತೀರ ನಾಚಿಕೆ ಮತ್ತು ಸಂಕೋಚ. ಪವಿತ್ರವಾದ ವಸ್ತುವೊಂದನ್ನುಅಷ್ಟಾಗಿ ಬಳಸಲು ನನ್ನ ಮನಸೊಪ್ಪಲಿಲ್ಲ

ಪರಸ್ಪರ ಪ್ರೀತಿಸಿ, ಮನವೊಪ್ಪಿ, ಅತಿ ಸ್ನೇಹದಿಂದ ಒಂದಾದ ನಮ್ಮ ಜೀವನ ಸುಖಮಯವಾಗಿ ನಡೆದು ಹೋಗುತ್ತಿತ್ತು. ನಮ್ಮ ಪರಸ್ಪರ ಪ್ರೀತಿ ವಿಶ್ವಾಸಗಳಲ್ಲಿ, ನಮಗೆ ಆಗೀಗ ಬರುವ ಹಣಕಾಸಿನ ತೊಂದರೆಗಳು ಸಹ ನಮ್ಮನ್ನು ಬಾಧಿಸುತ್ತಿರಲಿಲ್ಲ.

ನಮ್ಮವರು ಬಹಳ ಒಳ್ಳೆಯ ಸ್ವಭಾವದವರು. ನನಗೆ ಎಷ್ಟು ಆತುರವೊ, ಅಷ್ಟು ನಿಧಾನ ಸಂಯಮ ಅವರಲ್ಲಿ. ಸಿಟ್ಟು ಬರುವುದಂತೂ ತೀರ ಅಪರೂಪ. ಅವರಾ ಸುಂದರ ನಗುಮೊಗವೇ, ನನ್ನ ಜೀವನದ ಬೆಳಕು. ಆ ಒಲುಮೆಯ ಕಿರುನಗೆಯೇ ನನ್ನ ದಿನದಿನದ ಜೀವನದ ಉತ್ಸಾಹವಾಗಿತ್ತು. ಅದರಂತೂ ಪ್ರತಿಯೊಂದಕ್ಕೂ ಸೀತೆ ಬದಿಯಲ್ಲೇ ಇರಬೇಕು. ಜೀವನದ ಬರೇ ಪಾಲುಗಾರ್ತಿ ಮಾತ್ರವಲ್ಲದೆ, ಅವರ ಅಂತರ್ಯದ ಗೆಳತಿಯೂ ನಾನೇ ಆದೆ ಮದುವೆಯಾಗಿ ಬಂದಾಗಲಿಂದ ನಾನು, ಒಂದು ಸಲವಾದರೂ ತೌರಿಗೆ ಹೋಗಿರಲಿಲ್ಲ. ಅವರನ್ನು ಬಿಟ್ಟು ಹೇಗಾದರೂ ಹೋಗುವುದೆಂದು ಅನ್ನಿಸಿತ್ತು ಆದರೂ ನನ್ನ ಪುಟ್ಟ ತಮ್ಮ ರಾಜುವಿನ ನೆನಪಾದಾಗಲೆಲ್ಲಾ ತೌರಿನ ಸವಿ ಬೇಕೆನ್ನಿಸುತ್ತಿತ್ತು. ತೌರಿನಲ್ಲಿದ್ದಾಗ, ನನ್ನ ತಮ್ಮ ನನ್ನ ಬದಿಯಲ್ಲೇ ಮಲಗುವನು. ಶಾಲೆಯಲ್ಲಿರುವಾಗ ಬಿಟ್ಟು, ಯಾವಾಗಲೂ ನನ್ನೊಟ್ಟಿಗೇ ಇರುತ್ತಿದ್ದನು. ನಾನು ಮದುವೆಯಾಗಿ ಬಂದ ಹದಿನೈದು ದಿನಗಳಲ್ಲಿ, ನನ್ನ ಕನವರಿಕೆಯಲ್ಲಿ ಅವನಿಗೆ ಜ್ವರವು ಸಹ ಬಂದಿತ್ತೆಂದು ನನ್ನ ತಾಯಿ ಪತ್ರದಲ್ಲಿ ಬರೆದಿದ್ದರು. ಈ ದಿನವೇಕೋ, ಅವನನ್ನು ನೋಡಬೇಕೆಂಬಾಸೆ ನನ್ನನ್ನು ವಶಪಡಿಸಿಕೊಂಡಿತು. ಸಂಜೆ ಅವರು ಬಂದ ಮೇಲೆ, ಅವರನ್ನು ಒಪ್ಪಿಸಿ, ಕೆಲವು ದಿನವಾದರೂ, ತೌರಿಗೆ ಹೋಗಿ ಬರೋಣವೆಂದು ಯೋಚಿಸುತ್ತ ಕುಳಿತೆ.

ಇಷ್ಟರಲ್ಲೇ ನಾಲ್ಕು ಗಂಟೆಯಾಯಿತು. ಮತ್ತೆ ಅವರು ಬರುವ ವೇಳೆಗೆ ಕಾಫಿ ತಿಂಡಿ, ಪುನಃ ರಾತ್ರಿಯ ಊಟದ ಬಗ್ಗೆ ನೋಡಲು ಅಡುಗೆಮನೆಗೆ ಹೊರಟೆ.

* * * *

## ಸಂಜೆ

ಆಗ ತಾನೆ ಅವರು ಕಾಫಿ ತಿಂಡಿ ಮುಗಿಸಿ, ತೋಟದಲ್ಲಿ ಕುಳಿತಿದ್ದರು. ನಮ್ಮ ಮನೆ, ಆಡಂಬರವಿಲ್ಲದಿದ್ದರೂ ಅನುಕೂಲವಾದ ಓರಣವಾದ ಮನೆ ಮನೆಯ ಮುಂದೆ ಪುಟ್ಟ ತೋಟ ತೋಟದಲ್ಲಿ ನಾವೇ ಸ್ವಂತವಾಗಿ ಬೆಳೆಸುತ್ತಿದ್ದ ಗಿಡಗಳು ನಮ್ಮ ಬಾಳಿನಂತೆಯೇ, ನಮ್ಮ ತೋಟವೂ ಸಹ ಕಲಕಲವಾಡುತ್ತಿತ್ತು. ತೋಟದಲ್ಲಿ ತಿರುಗುತ್ತ, ಒಂದೆರಡು ಗುಲಾಬಿಗಳನ್ನು ತೆಗೆದು ಕೈಲಿ ಹಿಡಿದುಕೊಂಡು ನಮ್ಮವರು ಕುಳಿತ ಎಡೆಗೆ ಬಂದೆ ಅವರು, ನನ್ನ ಕೈಲಿರುವ ಗುಲಾಬಿಯನು ತೆಗೆದುಕೊಂಡು ‘ ತಿರುಗು ಸೀತೇ, ಹೂವನ್ನು ತುರುಬಿನಲ್ಲಿಡ ತ್ತೇನೆ” ಎಂದರು ಅವರಿಗದೊಂದು ತೃಪ್ತಿ ! ಅವರ ಆ ಪ್ರೀತಿಗೆ ನನ್ನ ಕಣ್ಣಲ್ಲಿ ನೀರೂರಿತು. ತೌರಿಗೆ ಹೋಗಬೇಕೆಂದಿರುವ ಸಮಾಚಾರವನ್ನಾದರೂ ಹೇಗೆ ಹೇಳಲಿ ಎನ್ನಿಸಿತು.

“ ಇಲ್ಲಿ ನೋಡೀಂದ್ರೆ.. ..” ಎಂದು ಅವರ ಬದಿಯಲ್ಲಿ ಹೋಗಿ ಕುಳಿತೆ.

“ ಏನು ? ಯಾವ ಸಮಾರಂಭಕ್ಕಾಗಿ ಈ ಪೀಠಿಕೆ ? ಮನ್ನಣೆ !” ಎಂದರು.

“ ಅಲ್ಲಾಂದ್ರೆ, ಇಲ್ಲಿಗೆ ಬಂದು ಹತ್ತಿರ ಹತ್ತಿರ ಮೂರು ವರ್ಷಗಳಾಗುತ್ತ ಬಂತಲ್ಲವೆ ? ಒಂದು ಸಲವಾದರೂ ತೌರಿಗೆ ಹೋಗಲೇ ಇಲ್ಲ ... ”

“ ಓಹೋ ! ಮೆಲ್ಲಗೆ, ಪ್ರಯಾಣಕ್ಕೆ ಸನ್ನಾಹ ಮಾಡುತ್ತಿದ್ದೀಯೇನು ? ”

“ ಹೂಂ ! ಕೆಲವು ದಿನ ಹೋಗಿ ಬರೋಣವೆಂದು ”....

“ ಏಕೆ ! ಬೇಸರವಾಯಿತೇನೇ ಸೀತೆ ?” ಎಂದರು, ನನ್ನ ಮುಂಗುರುಳನ್ನು ನೇವರಿಸುತ್ತಾ.

“ ಉಹುಂ, ಹಾಗಲ್ಲಾಂದ್ರೆ ಒಂದು ಬಾರಿಯಾದರೂ ರಾಜೂನ, ಅಪ್ಪ ಅಮ್ಮನನ್ನು ನೋಡಿಕೊಂಡು ಬರೋಣವೆಂದು. ಪಾಪ ! ಅಪ್ಪ ಎಷ್ಟು ಸಲ ಬರೆದಿದ್ದರು....ರಾಜೂನ ನೋಡಬೇಕೂಂತ ಇದ್ದೆ....”

" ಅವರನ್ನೇ ಇಲ್ಲಿಗೆ ಬರಲು ಬರೆಯೋಣ ಸೀತೆ "

" ಅದೂ ಸರಿ. ಆಗಲಿ, ಒಂದು ಸಲವಾದರೂ ನಾನು ಹೋಗಿ ಬಂದರೆ, ಅವರನ್ನು ಬರಹೇಳುವುದೂ ಚೆನ್ನ. ಈ ಸಲ, ನಾನು ಹೋಗಿ ಬರುತ್ತೇನೆ . ಏನಂತೀರಿ ... ? "

ಆಗಾಗಲೇ ನಮ್ಮವರ ಮುಖ ಸಪ್ಪಗಾಗಿತ್ತು.

" ಹೂಂ, ಮತ್ತೆ, ಇಲ್ಲಿ ನನ್ನ ಸಮಾಚಾರ ? " ಎಂದರು

" ಬೇಗ ಬರುತ್ತೇನೆ ಒಂದು ವಾರದಲ್ಲಿ ಹಿಂತಿರುಗುತ್ತೇನೆ. ಮುಂಚೆಯೆಲ್ಲ ನಾನೇ ಇದ್ದೆನೇ ? "

" ಅದೇನೇ ಆಗಲಿ, ನನಗಂತೂ ನೀನು ಯಾವಾಗಲೂ ಒಟ್ಟಿಗಿದ್ದ ನೆನಪೇ! ನೀನು ಜನ್ಮಜನ್ಮಾಂತರದ ಗೆಳತಿ ಕಣೇ ಸೀತೇ ! " ಎಂದರು. ಅವರ ಧ್ವನಿ ಭಾರವಾಗಿತ್ತು. ಅವರು ಹಾಗೆಂದಾಗ ನನ್ನ ಕಣ್ಣಲ್ಲಿ ಬರುತ್ತಿದ್ದ ನೀರನ್ನು ತಡೆಗಟ್ಟಲಾರದೆ ಹೋದೆ. ಅವರು ಅದನ್ನು ಗಮನಿಸಿ, ನನ್ನನ್ನು ತನ್ನ ಹತ್ತಿರಕ್ಕೆ ಸೆಳೆದುಕೊಂಡು ನನ್ನ ಮುಖವನ್ನು ನೇವರಿಸುತ್ತಾ " ಹೌದು ಸೀತೆ, ನಿನಗೂ ಕಷ್ಟವೆನಿಸುತ್ತೆ ಹಾಗೂ ಹೆಣ್ಣು ಹೃದಯವಲ್ಲವೆ ? ಅಂತೇ ತೌರಿನ ಸವಿಯೂ ಆಗೀಗ ಬೇಕೆನಿಸುತ್ತೆ. ಹೋಗಿ ಬಾ. ಆಗಲಿ, ಬೇಗ ಬಂದುಬಿಡು. " ಎಂದು ಒಪ್ಪಿದರು.

" ನಾನೊಬ್ಬಳೇ ನಿಮ್ಮನ್ನು ಬಿಟ್ಟು ಬಹಳ ದಿನ ಇರಬಲ್ಲೆನೆ ? " ಎಂದು ಅವರ ವಕ್ಷದಲ್ಲಿ ಮುಖ ಮರೆಮಾಡಿದೆ.

೨

ತೌರಿಗೆ ಬಂದು ಇಂದಿಗೆ ನಾಲ್ಕೈದು ದಿನಗಳಾದವು. ಬಂದ ಮೊದಲೆರಡು ದಿನಗಳು ನನ್ನ ಹಳೆಯ ಗೆಳತಿಯರೊಡನೆ, ನನ್ನ ಹೊಸ ಜೀವನದ ಬಗ್ಗೆ ಹೇಳುವುದರಲ್ಲಿಯೂ, ಅವರಿವರ ಮಾತಿನಲ್ಲಿಯೂ, ಕಾಲದರಿವಿಲ್ಲದೆಯೇ ಕಳೆದು ಹೋದುವು. ಅಪ್ಪ, ಅಮ್ಮರಿಗಂತೂ, ನನ್ನ ಸುಖಜೀವನದ ಬಗ್ಗೆ ಕೇಳಿ ತುಂಬಾ ತೃಪ್ತಿಯಾಯಿತು. ಬಾಹ್ಯಾಡಂಬರದ ಜೀವನಕ್ಕಿಂತ, ಸಂತೃಪ್ತಿಯ ಜೀವನವೇ, ಅವರ ಮಗಳು ಆರಿಸಿದ್ದ ಕಾರಣವು ಈಗೀಗ ಮನವರಿಕೆಯಾಗಿರಬೇಕು ಅವರಿಗೆ. ಹೆಣ್ಣಿಗೆ ಬೇಕಾದದ್ದು ಶ್ರೀಮಂತಿಕೆಯ ದಬ್ಬಾಳಿಕೆಯಲ್ಲ, ತನ್ನ ಪತಿಯ ಆದರ ಮತ್ತು ಒಲುಮೆ, ಎಂದು ನನ್ನ ಮುಖಭಾವದಿಂದ ಅವರು ಮನಗಂಡಿರ

ಬೇಕು. ಅಂತೇ, ನನ್ನ ಬಗ್ಗೆ ಅವರು ಸಂತೋಷ ತೃಪ್ತಿಯನ್ನು ವ್ಯಕ್ತ ಪಡಿಸುತ್ತಿದ್ದರು.

ಆ ದಿನ ಅಪ್ಪ ಆಫೀಸಿಗೆ ಹೋಗಿದ್ದರು. ರಾಜು ಇನ್ನೂ ಸ್ಕೂಲಿನಿಂದ ಬಂದಿರಲಿಲ್ಲ. ನನ್ನ ತಾಯಿ ಅಡುಗೆಮನೆಯಲ್ಲಿ ಹಪ್ಪಳ, ಸಂಡಿಗೆ ಸಮಾರಂಭದಲ್ಲಿ ನಿರತರಾಗಿದ್ದರು. ಅಮ್ಮನ ಸಹಾಯಕ್ಕೆಂದು, ಪಕ್ಕದ ಮನೆ ಜಯಮ್ಮನವರು ಬಂದಿದ್ದರು. ನಾನು ಸಂಡಿಗೆ ಹಿಟ್ಟನ್ನು ರುಚಿ ನೋಡಲು, ತೆಗೆದುಕೊಂಡು ಬಂದು ಪಡಸಾಲೆಯಲ್ಲಿ ಕುಳಿತೆ. ಅಷ್ಟಿಷ್ಟು ಹಿಟ್ಟನ್ನು ಬಾಯಲ್ಲಿ ಹಾಕಿಕೊಳ್ಳುತ್ತಿರುವಾಗ, ನನ್ನ ಮನಸ್ಸು ನಮ್ಮೂರ ಕಡೆ, ನಮ್ಮವರೆಡೆಗೆ ಓಡುತ್ತಿತ್ತು. ನಾನಿಲ್ಲದೆ ಹೇಗಿದ್ದಾರೋ, ಎನಿಸಿತು ಮುಂಜಾನೆಯಲ್ಲಿ ಕಾಫಿ ಕುಡಿಯುವ ಅಭ್ಯಾಸ ಅವರಿಗೆ ! ಮಾಡಿ ಕೊಡುವರ್‍ಯಾರು ? ಪಾಪ ! ಅವರ ಜೀವ, ಸರಿಯಾದ ಊಟ ಉಪಚಾರಗಳಿಲ್ಲದೆ ಎಷ್ಟು ನೊರಗಿದೆಯೊ ? .. ಇನ್ನು ಊರಿನ ಪ್ರಯಾಣವಾದರೆ ಒಳಿತು ಎಂದೆನಿಸುತ್ತಿತ್ತು ಆಗೀಗ, ನನ್ನ ತಾಯಿ ಮತ್ತು ಪಕ್ಕದ ಮನ ಜಯಮ್ಮನವರ ಸಂಭಾಷಣೆ ಕೇಳಿ ಬರುತ್ತಿತ್ತು.

" ಏನು ಲಕ್ಷಮ್ಮನೋರೆ, ಈ ಹಪ್ಪಳ ಸಂಡಿಗೆ ತಯಾರಿಕೆ ನಿಮ್ಮ ಮಗಳ ಸಂಸಾರಕ್ಕೆಂದೇ ? " ಎಂದರು ಜಯಮ್ಮನವರು.

" ಹೂನಮ್ಮ ನಮ್ಮ ಸೀತೆ, ಒಬ್ಬಂಟಿಗಳು. ಮನೇಲಿ ಮತ್ತಾರೂ ದೊಡ್ಡವರು ಇಲ್ಲ. ಎಲ್ಲಾ ತಾನೇ ಮಾಡಿಕೊಳ್ಳಬೇಕು. ಒಂದಿಷ್ಟು ಹಪ್ಪಳ ಸಂಡಿಗೆ, ಉಪ್ಪಿನಕಾಯಿ, ಕಾರದ ಹುಡಿ ಮಾಡಿಕೊಟ್ಟರೆ, ಅವಳಿಗೂ ಸುಲಭವಾದೀತೂಂತ."

" ಹೌದನ್ನಿ, ಅದು ಸರಿ ಕಣ್ರೀ, ಮದುವೆಯಾದ ಮೊದಲನೆಯ ವರ್ಷವೇ, ಹಬ್ಬ ಹುಣ್ಣಿಮೆಯೆಂದು ಮಗಳನ್ನು ಕರೆಯಿಸಿಕೊಳ್ಳುವ ಆಚಾರ ನಮ್ಮಲ್ಲೆಲ್ಲಾ ಉಂಟು. ನಿಮ್ಮಲ್ಲಿ ಹಾಗಿಲ್ಲವಾದೀತು ಮದುವೆಯಾಗಿ ಮೂರು ವರ್ಷವಾಗುತ್ತ ಬಂತು. ಈಗ ತಾನೇ ಮೊದಲನೆಯ ಸಲ ಹೆಣ್ಣುಮಗಳ ಬರುವಿಕೆ ! ಅದೇನ್ರೀ ಹಾಗೇ ? "

" ಎಲ್ಲಾ ಆಚಾರ ನಮಗೂ ಉಂಟು ಜಯಮ್ಮ. ಅಳಿಯಂದಿರು ಒಬ್ಬರೇ ಇರಬೇಕಾಗುತ್ತೆಂದು, ನಮ್ಮ ಸೀತೆಗೆ ಬರಲು ಇಷ್ಟವೇ ಇಲ್ಲ. ಅವರದು ಮನವೊಪ್ಪಿದ ದಾಂಪತ್ಯ. ಗಂಡ-ಹೆಂಡತಿ ಅನುಕೂಲದಿಂದಿರು

ವಾಗ, ನಾವೇಕೆ ಅವರನ್ನು ಅಗಲಿಸಬೇಕು, ಹೇಳಿ ? ಮನಸ್ಸು ಎಷ್ಟು ಬಿಗಿಮಾಡಿ ಬಂದಿರುವಳೊ ಈಗ! ಆಗಲಿ, ಅಲ್ಲಿಯ ಚಿಂತೆಯೇ ಅವಳಿಗೆ ....ನೋಡಿ ಜಯಮ್ಮ, ಹೆಣ್ಣು ಹೆತ್ತೋರಿಗೆ,ನಮಗೆ ಆಗಬೇಕಾದುದೇನ್ರಿ ಹೇಳಿ ! ಅವಳು ಸುಖವಾಗಿದ್ದರೆ ಸಾಕು. ಹೆಣ್ಣಿಗೆ ಗಂಡಿನ ಪ್ರೀತಿಗಿಂತ ಬೇರೊಂದು ಐಶ್ವರ್ಯವುಂಟೇ, ಹೇಳಿ ? ''

'' ಅದೇನೊ ನಿಜವೆನ್ನಿ. ನಿಮ್ಮ ಸೀತೇನ ನೋಡಿದರೇನೆ ತಿಳಿ ಯುತ್ತೆ. ಮುಖದಲ್ಲಿ ಆನಂದಲಕ್ಷ್ಮಿ ತಾಂಡವವಾಡುತ್ತಿದ್ದಾಳೆ ''

ಇಷ್ಟರಲ್ಲಿ ನನ್ನ ತಮ್ಮ ಶಾಲೆಯಿಂದ ಬಂದ

'' ಏನಕ್ಕಾ ಒಬ್ಬಳೇ ಕೂತೆ ! ಹೊತ್ತು ಹೋಗಲಿಲ್ಲೇನು ? ''

'' ಹೌದು ರಾಜಾ. ಅಮ್ಮ ಸಂಡಿಗೆ ತಿಂಡಿ ಮಾಡ್ತಾ ಇದ್ದಾಳೆ.ನಾನು ಹೀಗೇ ಕೂತೆ ! ''

'' ನಿಮ್ಮ ಊರಿನಲ್ಲಿದ್ದರೆ ಏನು ಮಾಡುತ್ತೀ ಅಕ್ಕಾ ? ''

'' ಎಷ್ಟು ಕೆಲಸವಿರುತ್ತಪ್ಪಾ ಅಲ್ಲಿ. ಭಾವನ ಕೆಲಸವೇ ಸರಿ ಹೋಗುತ್ತೆ. ಪಾಪ ! ಈಗ ಹೇಗಿದ್ದಾರೋ ! ''

'' ಓಹೊ ! ಹೀಗೇನು ? ನೀನು ಹೊರಟು ಹೋದಾಗಿಂದ ಈ ಎರಡು ವರ್ಷ ನಾವಿರಲಿಲ್ಲವೇನು ? ಹಾಗೇ ಇರುತ್ತಾರೆ ...''

'' ಹಾಗಲ್ಲ ರಾಜೂ, ನಿನಗಾದರೂ ಇಲ್ಲಿ ಅಮ್ಮ ಇದ್ದಾರೆ ಅವರು ಅಲ್ಲಿ ಒಬ್ಬರೇ ಇರಬೇಕಲ್ಲವೇ ? ನಾಳೆಯೇ ಹೊರಡೋಣವೇ ಎಂದು ಯೋಚಿಸುತ್ತಿದ್ದೀನಿ. ''

'' ಅದೇನಕ್ಕಾ ಹಾಗಂತೀ ! ಬಂದು ಇನ್ನೂ ಮೂರು ದಿನ ಸಹ ಕಳೆಯಲಿಲ್ಲ! ಆಗಲೇ ಪ್ರಯಾಣ ? ಮದುವೆ ಆದ ಮಾತ್ರಕ್ಕೆ ಹೀಗಿರ ಬೇಕೇನು ? ಪಕ್ಕದ ಮನೆ ಸಾವಿತ್ರಿ ನೋಡು. ಬಂದರೆ ಎಷ್ಟೋ ದಿನ ಇರುತ್ತಾಳೆ. ''

'' ಅವಳ ತರಹವೇ ಬೇರೆ ರಾಜೂ. ''

'' ತಾಳು, ಅಮ್ಮನಿಗೆ ಹೇಳ್ತೀನಿ, ಅಕ್ಕಾ. ನೀನಂತೂ ಈಚೆಗೆ ಬಹಳ ಬದಲಾಯಿಸಿದ್ದೀಯ! ನಿನಗೆ, ನನಗಿಂತ ಭಾವ ಹೆಚ್ಚಾದರೇನು?'' ರಾಜೂಗೆ ಸಿಟ್ಟೇ ಬಂದಿತ್ತು.

'' ಹಾಗೆ ಹೇಳಬಾರದು ರಾಜೂ, ನೀನು ನನ್ನ ಪುಟ್ಟ ತಮ್ಮ

ನಲ್ಲವೆ? '' ಎಂದು ಅವನನ್ನು ಹತ್ತಿರಕ್ಕೆ ಎಳೆದು ಅಪ್ಪಿಕೊಂಡು ''ಈಗ ನೋಡು ರಾಜೂ, ಅಕ್ಕನ ಕಣ್ಣಲ್ಲಿ ರಾಜು ಕಾಣುತ್ತಾನಲ್ಲವೆ ? ಪ್ರೀತಿ ಯಿದ್ದರೇನೇ ಹಾಗೆ ಕಾಣುವುದು. ಬಲ್ಲೆಯಾ ಪುಟ್ಟಾ ! '' ಎಂದೆ.

'' ಹೌದಕ್ಕಾ ನಿನಗೆ ರಾಜೂನೂ ಇರಬೇಕು, ಭಾವನೂ ಬೇಕು, ಅಲ್ಲವೆ ? ''

'' ಹೂಂ. ''

'' ಸೀತೇ, ರಾಜೂ, ಬನ್ನಿ ಕಾಫಿ ತಿಂಡಿ ತೆಗೆದುಕೊಳ್ಳುವಿರಂತೆ '' ಎಂದ ಅಮ್ಮನ ಕರೆಗೆ ಇಬ್ಬರೂ ಒಳಕ್ಕೆ ಹೋದೆವು.

೩

ಮೂರನೇ ದಿನ, ಅಪ್ಪ, ಅಮ್ಮ ಎಷ್ಟು ಹೇಳಿದರೂ, ಕೇಳದೆ ಊರಿಗೆ ಹೊರಟೇಬಿಟ್ಟೆ. ನಮ್ಮವರ ಮೌನದ ಕರೆ ಅಷ್ಟು ಬಲವಾಗಿತ್ತು. ಅಮ್ಮನು, ನಮ್ಮ ತೋಟದಲ್ಲಿಯ ಮಲ್ಲಿಗೆಯ ಮೊಗ್ಗನ್ನು ಆರಿಸಿ, ದಂಡೆ ಕಟ್ಟಿ ಕೊಟ್ಟು '' ಊರಿಗೆ ಹೋಗುವ ವೇಳೆಗೆ ಬಿಚ್ಚುತ್ತವಮ್ಮ. ಹಳ್ಳಿ ಹೂವಲ್ಲವೆ ? ಪರಿಮಳ ಹೆಚ್ಚು. ಸಂಜೆಗೆ ಮುಡಿದುಕೊ.''ಎಂದರು. ಅಪ್ಪ, ಅಮ್ಮ, ರಾಜು, ಒಂದೇಸವನೆ ಕಣ್ಣೀರಿಟ್ಟರು. 'ಅವರ'ನ್ನೂ ಕರೆದುಕೊಂಡು ಪುನಃ ಬರುತ್ತೇನೆಂದು ಸಮಾಧಾನ ಮಾಡಿದೆ ರಾಜು ವಿಗೆ ದಸರಾಹಬ್ಬಕ್ಕೆ ಬರಲು ನಿಮಂತ್ರಣ ಕೊಡುವಾಗಲಂತೂ, ಧ್ವನಿ ಕಟ್ಟಿತ್ತು. ಅಮ್ಮನಿಗೆ ನಮಸ್ಕಾರ ಮಾಡುವಾಗ ದುಃಖವನ್ನು ತಡೆಯ ಲಾರದೆ ಹೋದೆ. ರಾಜುವನ್ನು ಅಪ್ಪಿದಾಗಲಂತೂ ಗಟ್ಟಿಯಾಗಿ ಅತ್ತೇ ಬಿಟ್ಟೆ. '' ಹೋಗಿ ಬಾ ತಾಯಿ, 'ಸೀತೆ'ಯಾಗೇ ಬಾಳಮ್ಮಾ. '' ಎಂದು ಅಪ್ಪ ಅಮ್ಮ ಕಣ್ಣೀರಿಡುತ್ತಾ ಹರಸಿದರು. ಬಸ್ಸು ಕದಲಿತು.

ನಮ್ಮ ತೌರಿನಿಂದ, ನಮ್ಮೂರಿಗೆ ಇಪ್ಪತ್ತೈದು ಮೈಲಿ. ಬಸ್ಸಿನಲ್ಲಿ ಎರಡು ಗಂಟೆ ಪ್ರಯಾಣ. ಆ ದಿನವೇ ಬರಲಿರುವೆನೆಂದು ನಾನು ನಮ್ಮವರಿಗೆ ತಿಳಿಸಿರಲಿಲ್ಲ. ಒಂದು ವಾರದ ಗಡುವಿದ್ದಿದ್ದರೂ, ತೀರ ಐದು ದಿನದಲ್ಲೇ ಹಿಂತಿರುಗಿದ್ದೆ. ಸಂಜೆ ಐದು ಘಂಟೆ ವೇಳೆಗೆ ನಮ್ಮೂರು ಸೇರಿದೆ. ಬಸ್ಸಿಳಿದು ಗಾಡಿ ಮಾಡಿಕೊಂಡು ಮನೆಯ ಬಳಿ ಬಂದೆ. ನಮ್ಮವರನ್ನು ನೋಡುವ ಉತ್ಸಾಹದಲ್ಲಿ, ತಂದೆ ತಾಯನ್ನು ಬಿಟ್ಟುಬಂದ ದುಃಖವೂ ಮರೆಯಾಗಿತ್ತು. ಮನೆಯ ಮುಂಬಾಗಿಲು ಮುಚ್ಚಿತ್ತು.

ಬಹುಶಃ ನಮ್ಮವರು ಆಫೀಸಿನಿಂದ ಮನೆಗಿನ್ನೂ ಬರಲಿಲ್ಲವೇನೊ ಎಂದು ನೆನೆಯುತ್ತಲೇ ಬಾಗಿಲು ತಟ್ಟಿದೆ. ನಮ್ಮ ಆಳು, ತಿಮ್ಮ ಬಂದು ಬಾಗಿಲು ತೆಗೆದನು

" ರಾಯರೆಲ್ಲೋ ತಿಮ್ಮಾ ? " ಎಂದೆ.

" ಇನ್ನೂ ಬರಲಿಲ್ಲ ಅಮ್ಮಾವ್ರೆ "

" ಎಷ್ಟು ಹೊತ್ತಿಗೆ ಬರುತ್ತಾರೋ ? ಹೇಳಿ ಹೋಗಿದ್ದಾರೇನು?" ಎಂದು ಒಳನುಗ್ಗಿದೆ, ಮನೆಯ ಸುತ್ತಲೂ ಒಮ್ಮೆ ನೋಡುತ್ತಾ.

" ಅದೇನು ಹೇಳ್ಲಿ, ಅಮ್ಮಾವ್ರೆ, ನೀವು ಹೊರಟಿದ್ದೆ ಮನೆಯಲ್ಲಿ ತಳಕೆಳಕಾಯಿತು. ಅದ್ಯಾಕೆ ಅಮ್ಮಾವ್ರೆ, ರಾಯರಿಗಷ್ಟೊಂದು ಸಿಟ್ಟು ಈ ನಡುವೆ ? "

" ಇರಲಿ ನಡಿ ದಿನವೂ ಎಷ್ಟು ಹೊತ್ತಿಗೆ ಬರ್ತಾರೆ ಹೇಳು ? "

" ಇಷ್ಟು ಹೊತ್ತೂಂತ ಇಲ್ಲ ತಾಯಿ ಅದೆಲ್ಲಿ ಊಟ ಮಾಡ್ತಾರೊ, ಏನೊ....! ಒಂದೊಂದು ದಿನ ರಾತ್ರಿ ಹತ್ತುಗಂಟೆಯಾದರೂ ಬರುವುದಿಲ್ಲ. ಸದ್ಯ ನೀವು ಬಂದ್ರಿ.... ಇನ್ನು ಸರಿ ಹೋಗ್ತಾದೆ. ಅಮ್ಮಾವ್ರೆ. "

" ಸ್ನಾನಕ್ಕೆ ನೀರು ಬಿಸಿ ಮಾಡು " ಎಂದು ಅವನ ಮಾತನ್ನು ಅಷ್ಟಕ್ಕೇ ನಿಲ್ಲಿಸಿ, ಮನೆಯನ್ನು ಸರಿಮಾಡಲುಪಕ್ರಮಿಸದೆ ಮನೆಯೆಲ್ಲಾ ಧೂಳಿನಿಂದ ತುಂಬಿತ್ತು. ಡ್ರಾಯಿಂಗ್ ರೂಮಿನಲ್ಲಿ ಹೂ ಪಾತ್ರೆಯಲ್ಲಿ, ನಾನಿಟ್ಟು ಹೋದ ಹೂ ಎಲ್ಲಾ ಬಾಡಿತ್ತು. ಎಲ್ಲ ವಸ್ತುಗಳೂ ಅಸ್ತವ್ಯಸ್ತವಾಗಿದ್ದವು. ತಿಮ್ಮನ ಸಹಾಯದಿಂದ, ಎಂದಿನಂತೆ ಮನೆಯನ್ನು ಶುಚಿ ಮಾಡಿ, ಅಲಂಕರಿಸಿದೆ ಎಂದಿನಂತೆ ನನ್ನ ಮನೆ ಕಳೆಗೊಂಡಿತು. ಸ್ನಾನ ಮಾಡಿ, ಅಮ್ಮನಿತ್ತ ಉಡುಗರೆ ಹೊಸ ಹಸುರು ಸೀರೆಯನ್ನುಟ್ಟು ಅಂತ ಹುದೇ ಹಸರು ಕ್ರೇಪ್ ಜಾಕೆಟ್ಟನ್ನು ತೊಟ್ಟು, ಸಡಿಲವಾಗಿ ಹೆರಳ್ಹೆಣೆದು, ತುರುಬು ಕಟ್ಟಿದೆ. ಅಮ್ಮನಿತ್ತ ಮಲ್ಲಿಗೆ, ಆಗ ತಾನೆ ಅರಳಿ, ಗಾಳಿಯಲ್ಲಿ ಪರಿಮಳವನ್ನು ತುಂಬುತ್ತಿತ್ತು. ತುರುಬುಸುತ್ತ ಆ ಹೂವನ್ನು ಸುತ್ತಿ, ಕನ್ನಡಿಯಲ್ಲಿ, ಹಾಗೊಮ್ಮೆ ಹೀಗೊಮ್ಮೆ ನೋಡಿಕೊಂಡಾಗ, ನನ್ನ ಸಡಗರಕ್ಕೆ ನನಗೇ ನಗು ಬಂತು. ದೇವರ ದೀಪವನ್ನು ಹಚ್ಚಿ, ನಮಸ್ಕಾರ ಮಾಡಿ, ಅಡುಗೆಮನೆಯಲ್ಲಿ ಹೊಕ್ಕು ರಾತ್ರಿಗಾಗಿ ಸ್ವಲ್ಪ ಹೆಚ್ಚು ಹೆಚ್ಚಾಗೇ ಅಡುಗೆ ಮಾಡಿದೆ.

ಗಂಟೆ ಏಳಾಯಿತು. ಅಡುಗೆ ಕೆಲಸವನ್ನೆಲ್ಲಾ ಮುಗಿಸಿಕೊಂಡು ಮಹಡಿಯ ಮೇಲೆ ನಮ್ಮ ಕೋಣೆಗೆ ಹೋದೆ. ಬಾಗಿಲು ತೆಗೆದು ನೋಡಿದರೆ, ಆ ಅವಾಂತರಕ್ಕೆ ನಗು ಬಂದು ಹೊಟ್ಟೆಯುಬ್ಬಿತು. ಅವರಿಗೆ ಬಂದ ಪತ್ರಗಳು ಅಲ್ಲಲ್ಲೇ ಬಿದ್ದು ಕೊಂಡಿದ್ದವು. ಅವರ ಸಿಗರೇಟಿನ ಬೂದಿ, ಧೂಳಿನೊಡನೆ ಸೇರಿ ಕೋಣೆಯ ತುಂಬಾ ತುಂಬಿತ್ತು. ಎಂದೋ ಕುಡಿದಿಟ್ಟ ಕಾಫಿ ಬಟ್ಟಲು, ಇನ್ನೂ ಕಿಟಿಕಿಯಲ್ಲೇ ಇತ್ತು. ಇನ್ನೂ ಅವರ ಬಟ್ಟೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು....... ಅವರ ಮನಸ್ಸಿನ ಸ್ಥಿತಿಯನ್ನೇ ವ್ಯಕ್ತಪಡಿಸುತ್ತಿತ್ತು, ಆ ಕೋಣೆಯೂ ಸಹ... ಎಲ್ಲವನ್ನೂ ಯಥಾಸ್ಥಾನದಲ್ಲಿರಿಸಿ, ಕೋಣೆಯನ್ನೂ ಶುಭ್ರವಾಗಿಸಿ, ಒಂದು ಅಗರ ಬತ್ತಿಯನ್ನು ಹಚ್ಚಿ, ವರಾಂಡದಲ್ಲಿ ಅವರಿಗಾಗಿ ಕಾದು ಕುಳಿತೆ.

ಅನಿರೀಕ್ಷಿತವಾಗಿ ಬಂದ ನನ್ನನ್ನು ನೋಡಿದಾಗ ಅವರ ಮುಖಭಾವವನ್ನು ನೋಡಲು, ಕಾತರಿಸುತ್ತಿತ್ತು. ನನ್ನ ಹೃದಯ ಮದುವೆಯಾದ ನಂತರ, ಇದೇ ನಮ್ಮ ಮೊದಲನೆಯ ಅಗಲಿಕೆ. ಮತ್ತೆ ಅವರು ಬಂದಾಗ ಏನಂದಾರು ? ಇಂದಿನ ನನ್ನ ಅಲಂಕಾರ ಅವರಿಗೆ ಒಪ್ಪಿಗೆಯಾದೀತೇ ? ....ಎಂದು ಏನೆಲ್ಲ ಊಹಾರಾಜ್ಯದಲ್ಲಿ ಓಡಾಡುತ್ತ ಕುಳಿತೆ ಹುಣ್ಣಿಮೆಯ ಚಂದ್ರನೂ ಸಡಗರದಲ್ಲೇ ಓಡಾಡುತ್ತಿದ್ದ, ಆಕಾಶಮಾರ್ಗದಲ್ಲಿ...

ಎಂಟು ಗಂಟೆಯಾಯಿತು. ಇನ್ನೂ ಅವರು ಬರಲಿಲ್ಲ. ಏಕೆ ?.... ಎಷ್ಟು ಸಡಗರದಲ್ಲಿದ್ದೇನೆ.. ಅವರು ಬಾರದೆ ಇದ್ದಾರೇ ?... .... ಬಾರದೇ ಎಲ್ಲಿಗೆ ಹೋದಾರು !. ಸ್ನೇಹಿತರ ಮನೆಗೆಂದು ಹೋದರೆ. .. ನನ್ನ ಈ ಉತ್ಸಾಹ.... ಸಡಗರ... ಶೃಂಗಾರ.... ಉ ಹುಂ, ಛು.... ಇದೇಕೆ, ಅಂತಹ ಯೋಚನೆಗಳೆಲ್ಲ?... ಒಂದಾರು.... ಈಗ ಒಂದಾರು....

ಎಂಟೂವರೆ ಗಂಟೆ ! ಇನ್ನೂ ಬರಲಿಲ್ಲ... ಅದೇಕೆ ಹೀಗೆ ?........ ಎದ್ದು, ವರಾಂಡದಲ್ಲಿ ಶತಪಥ ಓಡಾಡಲು ಪ್ರಾರಂಭಿಸಿದೆ. ನೂರು ದೇವರುಗಳಿಗೆ ಬೇಡಿಕೊಂಡೆ ಮನಸ್ಸಿನಲ್ಲೇ, ಅವರು ಬೇಗ ಬರಲಿ ಎಂದು.... ಇನ್ನೂ ಬರಲಿಲ್ಲವೇಕೆ ?........

ಮಲ್ಲಿಗೆಯ ಪರಿಮಳವನ್ನು ತುಂಬಿಕೊಂಡು ಗಾಳಿ ಮನೆಯಲ್ಲೆಲ್ಲಾ ಓಡಾಡುತ್ತಿದೆ........ ಅವರು ಬಂದರೆ.. .... ಎಷ್ಟು ಸೊಗಸಾಗಿದ್ದೀತು ! ಅಪ್ಪ ಅಮ್ಮ ಎಷ್ಟಾಗಿ ಹೇಳಿದರೂ ಕೇಳದೇ, ಈ ದಿನವೇ ಹೊರಟು

ಬಂದೆ. ರಾಜು ಬಿಕ್ಕಿ ಬಿಕ್ಕಿ ಅತ್ತಿದ್ದ. ಹಾಗೆಂದು ನನಗೆ ಈ ಶಿಕ್ಷೆಯೇ?.... ನನಗೆ ಕಣ್ಣಲ್ಲಿ ನೀರೂರಿತ್ತು. ಹೊಸ ಸೀರೆ ಭಾರವಾಗಿ ಕಂಡುಬಂತು.... ಇನ್ನೂ ಬರಲಿಲ್ಲವೇಕೆ ಅವರು?........

ಇಷ್ಟರಲ್ಲೇ ಗಾಡಿಯ ಶಬ್ದ.... ನಮ್ಮ ಮನೆಯ ಮುಂದೆಯೇ ನಿಂತಿತು.... ಹೂಂ ಅವರೇ! ಸದ್ಯ, ನಮ್ಮವರು ಬಂದರು..... ...ನಾನು ಕೆಳಕ್ಕೆ ಇಳಿಯದೆ ಅಲ್ಲೇ ನಿಂತೆ

"ಏನೋ ತಿಮ್ಮ! ನಿನ್ನ ಪುಣ್ಯಕ್ಕೆ ಈ ದಿನ ಮನೆ ಮುಂದೆ ದೀಪ ಹಾಕಿದ್ದೀಯಾ?........ಏನು ಮಾಡಿದರೇನು? ಅಮ್ಮಾವರಿಲ್ಲದ ಮನೆ, ದೇವರಿಲ್ಲದ ಗುಡಿಯಂತೆ." ಎಂದು ಹೇಳಿಕೊಂಡೇ ಒಳಕ್ಕೆ ಕಾಲಿಟ್ಟರು, ನಮ್ಮವರು.

ಅವರ ಆ ಅತ್ಯಂತ ಪ್ರೀತಿಗೆ, ಅಂತಹವರನ್ನು ನನ್ನವರನ್ನಾಗಿ ಮಾಡಿದ ದೇವರಿಗೆ, ಮನಸ್ಸಿನಲ್ಲೇ ಸಾವಿರ ನಮಸ್ಕಾರ ಹಾಕಿದೆ.

" ಅಮ್ಮಾವ್ರು ಬಂದವ್ರೆ ರಾಯ್ರೆ." ಎಂದ ತಿಮ್ಮ.

" ಎಲ್ಲೋ? ಫೂಲ್! ನಿಧಾನವಾಗಿ ಹೇಳ್ತಾನೆ! ಎಲ್ಲೋ ಅಮ್ಮಾವ್ರು?"

" ಮಾಡೀ ಮೇಲವ್ರೆ ರಾಯ್ರೆ. "

ಜಾರುವುದೂ, ಬೀಳುವುದೂ ಸಹ ತಿಳಿಯದೆ, ಹತ್ತಿ ಬಂದರು ನಮ್ಮವರು.

" ಸೀತೇ, ಏ ಸೀತೇ ...ಬಂದೆಯಾ....!"ಎಂದು ಕೈಚಾಚಿಕೊಂಡೇ ಬಂದರು.

ಅವರೆರಡು ಕೈಗಳನ್ನೂ ನನ್ನ ಕೈಗಳಲ್ಲಿ ತೆಗೆದುಕೊಂಡು ಕಣ್ಣಿ ಗೊತ್ತಿಕೊಂಡು " ಹೌದು, ಬಂದುಬಿಟ್ಟೆ. ನಿಮ್ಮನ್ನು ಬಿಟ್ಟು ಇರಲಾ ಲಾರದೆ ಹೋದೆ. " ಎಂದೆ.

" ಹೌದೆ ಸೀತೆ? ನಾನಂತೂ ಶೀರ ಹುಚ್ಚನಾಗೇ ಇದ್ದೆ.... ಎಷ್ಟು ಚೆಲುವೆಯೇ ನೀನು ಸೀತೆ! ಆ ಹಸಿರು ಸೀರೆಯಲ್ಲಿ ವಸಂತಲಕ್ಷ್ಮಿ ಯಂತೆ ಕಲಕಲನೆ ಕಾಣುತ್ತಿರುವೆ!"

" ............... "

" ಮನೆಯೆಲ್ಲಾ ಹೂ-ಪರಿಮಳದೊಂದಿಗೆ, ಎಷ್ಟು ಚೆನ್ನಾಗಿದೆ....

ಮನೆ ತುಂಬಿದೆ! ನನ್ನ ಹೃದಯವೂ ಸಹ....ನನ್ನ ಸೀತೆ....! " ಎಂದವರು ನನ್ನನ್ನು ತನ್ನ ಒಳಿಗೆ ಎಳೆಕೊಂಡಾಗ ನನ್ನ ತಪಸ್ಸೆಲ್ಲಾ ಸಾರ್ಥಕ ವೆನಿಸಿತು.

"ನೋಡೆ ಸೀತೆ... ಈ ದಿನ ಚಂದ್ರನಿಗೂ ಒಂದು ಕಳೆ ಬಂದಿದೆ!"

" ಬಿಡೀಂದ್ರೆ ಗಂಟೆ ಒಂಬತ್ತಾಗುತ್ತಾ ಬಂತು. " ಎಂದೆ, ಅವರ ಬಿಗಿಯಪ್ಪಿಗೆಯಿಂದ ಬಿಡಿಸಿಕೊಳ್ಳುತ್ತಾ.

" ಉಹುಂ. ಈ ದಿನ ನಮಗೂ ಕಾಲಕ್ಕೂ ಸಂಭಂಧವಿಲ್ಲ.... " ಎಂದರು ಮುಖವರಳಿಸುತ್ತಾ.

" ಚೆನ್ನಾಯಿತು....ಬಿಸಿ ನೀರಿದೆ, ಸ್ನಾನ ಮಾಡಿ ಸರಿಯಾಗಿ ಊಟ ಮಾಡಿ ಎಷ್ಟು ದಿನವಾಯಿತೊ? ಮುಖವೆಲ್ಲ ಹೇಗೆ ಬತ್ತಿಹೋಗಿದೆ! . ಬನ್ನಿ. " ಎಂದು ಕೆಳಗಿಳಿಯಹೋದೆ.

" ಸೀತೆ.... ! "

" ಏನು ? "

" ನೋಡು, ಇನ್ಮುಂದೆ, ನೀನು ಮಾತ್ರ, ಹೀಗೆ ಹೋಗಬೇಡ. ಅವರನ್ನೇ ಇಲ್ಲಿಗೆ ಬರಹೇಳಿದರಾಯಿತು "

" ಹುಂ ಹಾಗೇ ಆಗಲಿ. ಬನ್ನಿ, ಸ್ನಾನ ಮಾಡುವಿರಂತೆ. "

* * * *

" ಸೀತೇ, ಇಬ್ಬರಿಗೂ ಎಲೆ ಹಾಕು. ಒಟ್ಟಿಗೇ ಕುಳಿತು ಕೊಳ್ಳೊಣ. "

* * * * *

" ಇದೇನೇ ಸೀತೇ, ಈ ದಿನ ಪಾಯಸ ಮಾಡಿದ್ದೀ ! " ಎಂದರು ನಸುನಗುತ್ತಾ.

" ಪುನರ್ಮಿಲನವೆಂದು " ಎಂದು ನಾನಂದಾಗ ಅವರು ನನ್ನೆಡೆ ನೋಡಿದ ನೋಟಕ್ಕೆ ನಾಚಿ ತಲೆ ಬಗ್ಗಿಸಿದೆ.

---

# ದಿನಚರಿ ‡ ‡ ‡ ‡

೧

ಆ ದಿನ, ಮನೆಗೆಲಸವೆಲ್ಲವನ್ನೂ ಬೇಗ ಮುಗಿಸಿಕೊಂಡು, ನಿತ್ಯಕ್ಕಿಂತಲೂ ಸ್ವಲ್ಪ ಹೆಚ್ಚಾಗಿಯೇ "ಡ್ರೆಸ್" ಮಾಡಿಕೊಂಡಿದ್ದೆ ನಾನು ಹೇಳಿಕೊಳ್ಳುವಂತಹ ಚೆಲುವೆಯಲ್ಲದಿದ್ದರೂ ನಮ್ಮವರು ದಿನದಿನವೂ ನನ್ನಲ್ಲಿಲ್ಲದ ಚೆಲುವೊಂದನ್ನು ಸೃಷ್ಟಿಸಿಕೊಂಡು, ಅವರನುಭವಿಸುತ್ತಿದ್ದ ಆನಂದ ಮತ್ತು ತೃಪ್ತಿ, ನನ್ನಲ್ಲಿ. ನನಗರಿಯದ ಒಂದು ಹೊಸ ಚೇತನವನ್ನೂ ಲವಲವಿಕೆಯನ್ನೂ ಉಂಟುಮಾಡಿತ್ತು. ಒಬ್ಬಳೇ ಕುಳಿತಾಗಲೆಲ್ಲಾ ಆಲೋಚಿಸುತ್ತಿದ್ದೆ: ದಾಂಪತ್ಯಜೀವನದಲ್ಲಿ, ಸುಗಮವಾದ ನಡಿಗೆಗೆ ಹೆಣ್ಣು-ಗಂಡಿನ ಸಂಪೂರ್ಣ ಐಕ್ಯತೆ ಎಷ್ಟು ಅವಶ್ಯವೆಂದು. ಬೇರೆ ಬೇರೆ ಎರಡು ಜೀವಗಳು ಎಲ್ಲ ವಿಷಯದಲ್ಲೂ ತೀರ ಒಂದಾಗಿದ್ದುದೇ ಆದರೆ, ಅವರ ಮನೋಭಾವಗಳು ಒಬ್ಬರನ್ನನುಸರಿಸಿ ಮತ್ತೊಬ್ಬರದು ಮಾರ್ಪಾಡಾಗುವುದೊಂದೇ ಅಲ್ಲದೆ, ಅವರ ಮುಖಲಕ್ಷಣಗಳೂ ಸಹ ತೀರ ಒಂದಾಗೇ ಕಾಣುತ್ತೆಂದು ಮನಃಶಾಸ್ತ್ರಜ್ಞರು ಹೇಳುತ್ತಾರೆ ನಮ್ಮವರು ಬಹಳ ಸುಂದರರು. ಅವರಲ್ಲೇ, ಅವರ ಸೌಂದರ್ಯದಲ್ಲೇ ತೀರ ತನ್ಮಯಳಾದ ನನ್ನಲ್ಲಿ, ಬಹುಶಃ ಹೊಸದೊಂದು ಚೆಲುವು ಕಾಣುತ್ತಿದ್ದಿರಬೇಕು ! ದಾಂಪತ್ಯಜೀವನದಲ್ಲಿ, ತನ್ನ ಪತಿಯಲ್ಲೇ ಪೂರ್ಣ ಐಕ್ಯಳಾದ ಹೆಣ್ಣಲ್ಲಿ, ಅಪೂರ್ವವಾದ ಆ ತೃಪ್ತಿ, ಅದೊಂದು ಶೋಭೆ ಎದ್ದು ಕಾಣುತ್ತೆ. ಅದನ್ನೇ ನಾನು 'ಚೆಲುವು' ಎನ್ನುವುದು. ನಮ್ಮ ಹಿಂದಿನವರೆಲ್ಲ ಅದಕ್ಕೇ "ಕಳೆ" ಎನ್ನುತ್ತಾರೆ. ಹರಟೆಯಲ್ಲಿ ಎಲ್ಲೊ ಹೊರಟೆ !

ಆ ದಿನ ಬೆಳಿಗ್ಗೆ ನಮ್ಮವರು ಆಫೀಸಿಗೆ ಹೋಗುತ್ತ, ಸಂಜೆ ಸಿನಿಮಾ ಪ್ರೊಗ್ರಾಂ ಉಂಟೆಂದು ಹೇಳಿ ಹೋಗಿದ್ದರು. ಅಂತೇ ಬಹಳ ಉತ್ಸಾಹದಲ್ಲಿ ತಯಾರಾಗುತ್ತಿದ್ದೆ. ಅಷ್ಟರಲ್ಲಿ ನಮ್ಮವರು ಬಂದೇ ಬಿಟ್ಟರು, "ಸೀತೇ, ಸೀತೇ, ತಯಾರೇನೇ ?" ಎನ್ನುತ್ತ.

ಅವರನ್ನು ಸ್ವಾಗತಿಸಲು, ಧಡಧಡನೆ ಮಹಡಿಯಿಂದ ಕೆಳಗಿಳಿದು ಹೋದೆ. ನನ್ನನ್ನು ನೋಡಿ ಅವರು ನಗುತ್ತಲೇ "ಬೆಳದಿಂಗಳ ರಾಣಿಯಂತೆ

ಕಾಣುತ್ತೀ ಸೀತೆ! ಮೇಘವರ್ಣದ ಚುಕ್ಕಿ ಸೀರೆ, ನಿನಗೆ ಬಹಳ ಚೆನ್ನಾಗಿ ಒಪ್ಪುತ್ತೆ ಕಾಣೆ! " ಎಂದರು.

" ನೀವು ಹುಟ್ಟಾ ಕವಿಗಳು ಬಿಡಿ! ನನ್ನ ಚೆಲುವೆಲ್ಲಾ ನಿಮ್ಮ ಊಹಾರಾಜ್ಯದಲ್ಲೇ. " ಎಂದೆ.

" ಹುಂ, ಕವಿತೆ ನೀನಾದಾಗ, ನಾನು ಕವಿಯಾಗಬೇಡವೆ? "ಎಂದು ನನ್ನೆಡೆಗೇ ಬರುತ್ತಿದ್ದರು. ಅವರನ್ನು ತಪ್ಪಿಸಿಕೊಳ್ಳುತ್ತ "ಬಿಡಿರಿ ಹೀಗೇ ಇಲ್ಲದ ಸರಸದಾಟವಾಡುತ್ತ ಕುಳಿತುಕೊಂಡರೆ, ಅಲ್ಲಿ ಸಿನಿಮಾ ಪ್ರಾರಂಭವಾಗಿ ಹೋಗಿರುತ್ತೆ " ಎಂದೆ.

"ಹೋಗಲಿ ಬಿಡು. ಈ ಸಂತೋಷಕ್ಕಿಂತ, ಆ ಸಿನಿಮಾ ಹೆಚ್ಚೇನು?" ಎಂದು ಬಟ್ಟೆ ಬದಲಾಯಿಸಲು ಹೊರಟರು.

ನಡೆದೇ ಇಬ್ಬರೂ ಹೊರಟೆವು.

" ಯಾವ ಸಿನಿಮಾಗೆ ಪ್ರೊಗ್ರಾಂ ಹಾಕಿದ್ದಾರೆ ಅಮ್ಮವರು ? " ಎಂದರು ನಮ್ಮವರು.

" ರೀ, 'ಬೈಜುಬವಾರಾ'ಗೆ ಹೋಗೋಣ. ಮೀನಾಕುಮಾರಿ ಚೆನ್ನಾಗಿ ಮಾಡುತ್ತಾಳಂತೆ. " ಎಂದೆ.

ಟಿಕೆಟ್‌ಗಳನ್ನು ತೆಗೆದುಕೊಂಡು ಥಿಯೇಟರ್‌ನಲ್ಲಿ ಹೋಗಿ ಕುಳಿತೆವು. ಆಟ ಪ್ರಾರಂಭವಾಗಲು ಇನ್ನೂ ಹದಿನೈದು–ಇಪ್ಪತ್ತು ನಿಮಿಷ ಇದ್ದವು. ನಮ್ಮವರು " ನೋಡು ಎಷ್ಟು ಬೇಗ ಕರೆದುಕೊಂಡು ಬಂದೆ, ನನಗೆ ಕೊಡಬೇಕಾದುದನ್ನೆಲ್ಲ ಕೊಡದೇನೇ! ಇರಲಿ ಬಿಡು. ಬಡ್ಡಿ ಸಮೇತ ವಸೂಲು ಮಾಡ್ತೀನಿ. " ಎಂದರು ನನ್ನ ಹೆಗಲ ಮೇಲೆ ಕೈ ಹಾಕುತ್ತಾ.

" ಹೂಂ, ಬಡ್ಡಿ ಸಮೇತ! ಕೊಡೋರು ಯಾರು ? " ಎಂದೆ.

" ಬಿಡೋರು ಯಾರು ? " ಎಂದರವರು ಮೆಲ್ಲಗೆ.

ಇಷ್ಟರಲ್ಲೇ "ಹೆಲ್ಲೋ ರಘೂ!"ಎಂದು ಒಬ್ಬ ಹೆಣ್ಣುಮಗಳು ನಮ್ಮ ಕಡೆಗೇ ಬಂದಳು. ಬಂದವಳೇ ನಮ್ಮವರ ಪಕ್ಕದ ಕುರ್ಚಿಯಲ್ಲೇ ಕುಳಿತಳು. ಆಕೆಯ ಆ ಧೈರ್ಯ ಮತ್ತು ಹಾರ್ದಿಕತನಕ್ಕೆ ನನಗೆ ತುಸು ಬೇಸರವೆನಿಸಿತು. ಎಷ್ಟು ದಿನದಿಂದಲೊ ನಮ್ಮವರೊಡನೆ ಈ ಸಿನಿಮಾಗೆ ಬರಲು ಕಾದು, ಹವಣಿಸಿ, ಹಂಚಿಕೆ ಹಾಕುತ್ತಿದ್ದ ನನಗೆ, 'ಈಕೆ' ಎಲ್ಲಿಂದ

ಬಂದಳು, ನಮ್ಮವರನ್ನು ಹಂಚಿಕೊಳ್ಳಲು ? ಎಂದೆನಿಸಿತು. ಬಿಳೀ ಜಾರ್ಜೆಟ್ ಸೀರೆಯನ್ನುಟ್ಟು, ಕುತ್ತಿಗೆ ಮುಚ್ಚುವ 'ಚೋಳಿ'ಯೊಂದನ್ನು ಹಾಕಿ, ಮುಖಕ್ಕೆ ಒಂದೂವರೆ ಇಂಚು ಪೌಡರನ್ನು ಹಾಕಿದ್ದಳು. ತಲೆಗೂದಲನ್ನು ಮೇಲಕ್ಕೆ ಬಾಚಿ, ಹಿಂದೆ ದೊಡ್ಡದಾದ ತುರುಬೊಂದನ್ನು ಕಟ್ಟಿ, ಸುತ್ತಲೂ ಪ್ಲಾಸ್ಟಿಕ್ ಮಲ್ಲಿಗೆಯನ್ನು ಸುತ್ತಿದ್ದಳು. ಕೃತಕಾಲಂಕಾರ ಭೂಷಿತೆಯಾದ ಆಕೆಗಿರುವ ಅಭಿರುಚಿಯನ್ನು ಆ ಪ್ಲಾಸ್ಟಿಕ್ ಮಲ್ಲಿಗೆಯು ಬಾಯಿಬಿಟ್ಟು ಹೇಳುತ್ತಿತ್ತು ಕೊನೆಯದಾಗಿ, ಆ ದಪ್ಪವಾದ ತುಟಿಗಳಿಗೆ ಕೆಂಪನ್ನೂ ಹಚ್ಚಿದ್ದಳು ಆಧುನಿಕ ಸಾಂಪ್ರದಾಯದಲ್ಲಿದ್ದ ಆಕೆಯ ಆ ವೇಷ ಆಕೆಗೆ ಒಪ್ಪಲಿಲ್ಲವಾಗಲಿ, ಅಸಹ್ಯತೆಯನ್ನೂ ಸೂಚಿಸುತ್ತಿತ್ತು. ಈ ಅಲಂಕಾರದ ಹೆಣ್ಣು ನಮ್ಮವರಿಗೆ ಹೇಗೆ ಪರಿಚಯವೆಂದು ಆವಾಕ್ಕಾಗಿ ನೋಡುತ್ತಿದ್ದೆ. ನಮ್ಮವರು ನನ್ನಿಂದ ಏನೊಂದೂ ಮರೆ ಮಾಚುತ್ತಿರಲಿಲ್ಲ. ನನ್ನಿಂದ ಮುಚ್ಚಿಡಬಹುದಾದ ರಹಸ್ಯವೂ ಅವರಲ್ಲಿರಲಿಲ್ಲ. ತನ್ನ ಬಾಲ್ಯ, ಶಾಲೆ, ವಿದ್ಯಾಭ್ಯಾಸ, ಪರಿಳಿತಗಳು, ಕಷ್ಟಸುಖಗಳು, ತನ್ನ ಮಿತ್ರರು, ಆಪ್ತರು, ಇವುಗಳನ್ನೆಲ್ಲ ಕುರಿತು, ಅವರು ನನ್ನಲ್ಲಿ ಆಗಾಗ ಹೇಳುತ್ತಲೇ ಇರುತ್ತಿದ್ದರು ಅಂತೇ, ಒಂದೇ ಮನೆಯಲ್ಲಿ ಹುಟ್ಟಿ ಬೆಳೆದವರಿಗಿಂತ ಹೆಚ್ಚಾಗಿ ನನಗೆ ಅವರ ಜೀವನಪರಿಚಯವಾಗಿತ್ತು ಮತ್ತೆಂದೂ ತನ್ನ ಸ್ನೇಹಿತರಲ್ಲಿ ಹೆಣ್ಣುಮಕ್ಕಳೂ ಇದ್ದಾರೆಂದು ಅವರು ಹೇಳಿರಲಿಲ್ಲ. ಸ್ತ್ರೀಸಹಜವಾದ, ಸಂದೇಹ, ಸಂಶಯಭಾವನೆಗಳು ನನ್ನಲ್ಲಾಗಲೇ ಓಡಾಡಲಾರಂಭಿಸಿದವು. ಅವರ ಸ್ಮೃತಿಪಥದಲ್ಲಿ ನಿಲ್ಲಬಹುದಾದ ವ್ಯಕ್ತಿ ಈಕೆಯಲ್ಲವೆಂದೇ, ನನ್ನಲ್ಲಿ ಆಕೆಯನ್ನು ಕುರಿತು ಹೇಳಲಿಲ್ಲವೆಂಬ ಔದಾರ್ಯದರಿಕೆ ನನಗೆ ಆಗಲಿಲ್ಲ. ಹಾಗೇ ದಂಗುಬಡಿದವಳಂತೆ ಕುಳಿತಿದ್ದೆ ನಮ್ಮವರು "ನೋಡು ಸೀತೆ, ಇವರು ನಾನು ಬಿ. ಎಲ್. ಓದುವಾಗ ನನ್ನ ಸಹಪಾಠಿ. ಮಿಸ್ ತಂಗಮ್ಮ........ . ಇವಳು ನನ್ನ ಸೀತೆ" ಎಂದು ನಮ್ಮಿರ್ವರಿಗೂ ಪರಿಚಯ ಮಾಡಿಕೊಟ್ಟರು. ಬಲವಂತವಾಗಿ, ನಾನೊಂದು ನಮಸ್ಕಾರ ಹಾಕಿದೆ. ಆಕೆಯೂ ಬದಲು ಕೈಮುಗಿದು, ತನ್ನ ದೊಡ್ಡದೊಡ್ಡ ಹಲ್ಲುಗಳು ಕಾಣುವ ಹಾಗೆ ಕಿರಿಯುತ್ತಾ "ನಿಮ್ಮನ್ನು ನೋಡಿದ್ದು ಬಹಳ ಸಂತೋಷ" ಎಂದು ಮತ್ತೆ ನಮ್ಮ ಯಜಮಾನರ ಪಕ್ಕದಲ್ಲೇ ಭದ್ರವಾಗಿ ಕುಳಿತಳು. ಇದೇಕಪ್ಪಾ ಹೀಗೆ ?— ಎನ್ನಿಸಿತು

ನನಗೆ.

ಆಟ ಪ್ರಾರಂಭವಾಗಿತ್ತು. ಆದರೆ ನನ್ನ ಉತ್ಸಾಹವೆಲ್ಲ ಕುಗ್ಗಿ ಹೋಗಿತ್ತು ನಾನು, ನಮ್ಮವರ ಮತ್ತು ಮಿಸ್ ತಂಗಮ್ಮನ ಕಡೆಗೇಸೇ ಕದ್ದು ಕದ್ದು ನೋಡುತ್ತಿದ್ದೆ. ಆಕೆ, ನಮ್ಮವರ ಎಡೆಕೇನೇ ಬಾಗಿ ಕುಳಿತಿದ್ದು, ನಮ್ಮವರೊಡನೆ ಹಲ್ಲು ಇಗಲಿಸುತ್ತಾ 'ಗುಸುಗುಸು' ಮಾತಾಡುತ್ತಿದ್ದುದನ್ನು ಕಂಡಾಗಲಂತೂ, ನನ್ನ ಹೊಟ್ಟೆಯೆಲ್ಲಾ ತಳಕೆಳಗಾದ ಹಾಗೆ ಆಯಿತು ಎಂದೂ ನಮ್ಮವರು ನನ್ನ ಕೈ ಹುಡುಕಿ, ತನ್ನ ಕೈಲಿ ಹಿಡಿಯುತ್ತಿದ್ದವರು, ಇಂದೇಕೊ, ಆಕೆಯ ಮಾತಿನಲ್ಲಿ ತಲ್ಲೀನರಾದಂತೆ ಇತ್ತು. ನಮ್ಮವರಿಗೆ ಕಿರುನಗೆ ಬ್ರಹ್ಮನಿತ್ತ ಕಾಣಿಕೆ! ಎಂದೂ ನನ್ನಹೇ ಆಗುತ್ತಿದ್ದ ಆ ಸುಂದರ ನಗೆ, ಈ ದಿನ ಆಕೆಯ ಪಾಲೇ ಆವ ಹಾಗಿತ್ತು. ಅವರು ಏನೆಲ್ಲ ಮಾತಾಡುತ್ತಿದ್ದರೋ ಕೇಳಿಸಿಲ್ಲವಾಗಲಿ, ನನಗಂತೂ ಅದನ್ನು ನೋಡುತ್ತ, ಸಹಿಸುತ್ತಾ, ಅಲ್ಲಿ ಕುಳಿತುಕೊಂಡಿರಲು ಆಗಲಿಲ್ಲ. ಹೃದಯ ಇರಿದಂತಾಗಿತ್ತು. ನನಗರಿಯದೆಯೇ ಈರ್ಷೆ ನನ್ನನ್ನು ಸಂಪೂರ್ಣವಾಗಿ ಆವರಿಸಿತ್ತು. ಎದ್ದು ಹೊರಟು ಹೋಗೋಣವೇ ಎನ್ನಿಸುತ್ತಿತ್ತು, ಕಣ್ಣೀರು ಸುರಿದು ಹೋಗುತ್ತಿತ್ತು.

"ಸೀತೇ, ಏಕೆ ಕಣ್ಣೀರು? ಹುಚ್ಚೀ, ಸಿನಿಮಾ ನೋಡಿ, ಯಾರಾದರೂ ಅಳುತ್ತಾರೆಯೇ? ನೋಡು, ಮೀನಾಕುಮಾರಿ ಆ 'ಪೋಸ್'ನಲ್ಲಿ ಎಲ್ಲ ನಿನ್ನ ಹಾಗೇ ಇದ್ದಾಳೆ." ಎಂದು ನಮ್ಮವರು ನನ್ನ ಬೆನ್ನಮೇಲೆ ಕೈಹಾಕಿದರು. ಅವರ ಕೈಯನ್ನು ತೆಗೆದು ಹಾಕಿ, ಮೌನದಲ್ಲಿಯೇ ಮುಖವನ್ನು ತಿರುಗಿಸಿ ಕುಳಿತುಕೊಂಡೆ. ಅವರೇನು ನೆನೆದರೋ, ಏನೊ, ಸುಮ್ಮನಾದರು. ಅವರು ನನ್ನೆಡೆಗೆ ಬಾಗಿ ಮಾತನಾಡಲು ಪ್ರಯತ್ನಿಸಿದರಾಗಲಿ, ನಾನು ಅವರ ಕಡೆಯೂ ಸಹ ನೋಡದೆ ಬಿಗಿಯಿಂದ ಕುಳಿತೆ. ಒಂದೊಂದು ನಿಮಿಷವೂ ಒಂದೊಂದು ಯುಗವಾಗಿ ಕಂಡುಬರುತ್ತಿತ್ತು. ಸಿನಿಮಾ ಬೇಗ ಮುಗಿಯಬಾರದೇಕೆ ಎಂಬ ಜಿಗುಪ್ಸೆ ಹೆಚ್ಚಾಗುತ್ತಿತ್ತು. ಆಗೀಗ, ಅವರ ಮತ್ತು ಮಿಸ್ ತಂಗಮ್ಮನ ಮಾತು ಅಷ್ಟಿಷ್ಟು ಕಿವಿಯಲ್ಲಿ ಬೀಳುತ್ತಿತ್ತು.

"ನೀವೆಲ್ಲಿ ರಘು, ಸಂಸಾರಸುಖಗಲ್ಲಿ ಹಳೆಯ ಗೆಳತಿಯರನ್ನು ಮರೆತೇ ಬಿಟ್ಟಿದ್ದೀರಿ!"

" .............. "

" ನಿಮಗೆ ಒಳ್ಳೇ ಟೇಸ್ಟ್! ಒಳ್ಳೆ ಚೆಲುವೆಯನ್ನೇ ಹಿಡಿದಿದ್ದೀರಾ "

"ಆಕೆಗೆಷ್ಟು ದಿಮಾಕು ನನ್ನ ಬಗ್ಗೆ ಹಾಗೆ ಮಾತಾಡಲು! ಹಿಡಿಯಲು ನಾನೇನು ಬೆಕ್ಕೇ, ನಾಯೇ ? ... ಇವರು ಎಷ್ಟು ಸಲಿಗೆ ಕೊಟ್ಟಿದ್ದರೆ, ಹಾಗೆ ಮಾತಾಡಬಲ್ಲಳು ! " ಎಂದುಕೊಂಡೆ. ಆಗ ನನ್ನ ಮನೋಭಾವ ತೀರ ಸಂಕುಚಿತವಾಗಿತ್ತು. ನನ್ನ ಮನಸ್ಸಿನ ಮೇಲೆ, ನನ್ನ ಹಿಡಿತ ತಪ್ಪಿತ್ತು. ನನಗೆ ನಮ್ಮವರ ಬಗ್ಗೆ ಇದ್ದ ಗೌರವ ಕಡಿಮೆಯಾಗುತ್ತಿತ್ತು.

ಕೊನೆಗೂ ಆಟ ಮುಗಿಯಿತು. ಎಲ್ಲರೂ ಹೊರಗೆ ಬಂದೆವು. ನಮ್ಮವರು ಹೋಗಿ ಮಿಸ್ ತಂಗಮ್ಮನನ್ನು ಜಟ್ಕಾದಲ್ಲಿ ಬೀಳ್ಕೊಟ್ಟು ಬಂದರು.

ಬೆಳದಿಂಗಳ ಕಾಂತಿ ಹಿತವಾಗಿತ್ತು. ನಮ್ಮವರಿಗೆ ಬೆಳದಿಂಗಳೆಂದರೆ ಹುಚ್ಚು. ಎಷ್ಟೋ ಬಾರಿ ನನ್ನನ್ನು ತಮ್ಮೊಟ್ಟಿಗೆ ದೂರ ದೂರ ನಡೆಯಲು ಕರೆದುಕೊಂಡು ಹೋಗುತ್ತಿದ್ದರು. ಆಗೆಲ್ಲ, ಅವರೊಟ್ಟಿಗೆ ಅವ್ಯಕ್ತವಾದ ಭಾವಗಳೊಂದಿಗೆ, ಅತೀತವಾದ ಶಾಂತಿಯನ್ನನುಭವಿಸುತ್ತಿದ್ದೆ. ಇಂದೇಕೊ ಅದು ಬೇಡವೆನಿಸುತ್ತಿತ್ತು........ ಅವರೊಟ್ಟಿಗೇ ನಡೆಯುತ್ತಿದ್ದೆನಾಗಲಿ, ನಮ್ಮಿರ್ವರ ನಡುವೆ ಸಂಶಯದ ಮಂಜು ಕವಿದಿತ್ತು.

" ಸೀತೇ, ಏನಾಯಿತೇ ನಿನಗೆ ? ಹೀಗೇಕಿದ್ದೀ ?. . .... ಹೇಳು.... ಸಪ್ಪಗಿದ್ದೀಯೇಕೆ ?" ಎಂದು, ಅವರು ನನ್ನನ್ನು ಎಷ್ಟು ಸಲ ಕೇಳಿದರೂ ಮೌನವಾಗಿದ್ದೆ. ಅಲ್ಲಿಂದ ಅವರು ಮೃದುವಾಗಿ ನನ್ನ ಮುಖವೆತ್ತಿದರು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ಆ ನೋಟ ಇಷ್ಟು ಹೊತ್ತೂ ತಡೆಗಟ್ಟಿದ್ದ ನನ್ನ ಕಣ್ಣೀರನ್ನು ಕೋಡಿವರಿಸಿತು. ಆದರೆ ನನ್ನಿಂದ ಮಾತನಾಡಲಾಗಲಿಲ್ಲ.

" ಸೀತೇ, ನಿನ್ನ ಮನಸ್ಸು ಬಹಳ ಮೃದು ಕಾಣೆ ! ಕಥೆ 'ಟ್ರಾಜೆಡಿ' ಅಲ್ಲವೇ ? ಅಂತೇ ನಿನ್ನ ಮನಸ್ಸು ಬಹಳ ನೊಂದಿದ್ದೀತು. ಮನೆಗೆ ಬಾ. ಎಲ್ಲವನ್ನೂ ಮರೆಸಿಬಿಡುತ್ತೇನೆ. " ಎಂದರು ಎಷ್ಟೋ ಪ್ರೀತಿಯಿಂದ.

ನನ್ನಲ್ಲಿ ಹೊಕ್ಕಿದ್ದ ಆ ಸಂಶಯಭೂತದ ಮುಂದೆ, ಅವರ ಆ ಪ್ರೀತಿ ಸಮಾಧಾನಗಳ ಮಾತುಗಳು ನಿಲ್ಲಲಾರದೆ ಹೋದವು. ಮನೆಗೆ ಬಂದನಂತರ, ಊಟ ಉಪಚಾರಗಳೆಲ್ಲಾ ಯಾಂತ್ರಿಕವಾಗೇ ನಡೆದವು.

ಎಂದಿನಂತಿರಲು ಅವರು ಪ್ರಯತ್ನಿಸುತ್ತಿದ್ದರಾಗಲಿ, ನನ್ನಲ್ಲಿಯ ಬಿಗುವು ಅವರ ಉತ್ಸಾಹಕ್ಕೆ ನೀರೆರಚುತ್ತಿತ್ತು. ದಿನದಿನವೂ ಅತಿ ಸಂತೋಷದಿಂದ ನಡೆದು ಹೋಗುತ್ತಿದ್ದ ಬಾಳು ಈ ದಿನ ಏಕೆ ಹೀಗೆ ? ಯಾವುದೊ, ತಳ ಹದಿಯಿಲ್ಲದ ಸಂಶಯವೊಂದನ್ನು ದೊಡ್ಡದು ಮಾಡಿಕೊಂಡು, ಅವರ ಮನಸ್ಸನ್ನೇಕೆ ನೋಯಿಸುತ್ತಿದ್ದೇನೆಂಬ ಪ್ರಶ್ನೆಗೆ ಉತ್ತರ ಹುಡುಕು ವಷ್ಟು ವಿವೇಚನಾಶಕ್ತಿಯೂ ಸಹ ನನ್ನಲ್ಲಳಿದುಹೋಗಿತ್ತು.

ರಾತ್ರಿ, ಎಂದಿನಂತೆ, ಹಾಲನ್ನೂ ತಾಂಬೂಲವನ್ನೂ ತೆಗೆದುಕೊಂಡು ಹೋದೆ. ನಮ್ಮವರು ಸಿಗರೇಟ್ ಹಿಡಿಯುತ್ತಾ ಕಿಟಕಿಯಿಂದಾಚೆ ನೋಡುತ್ತಿದ್ದರು. ನಾನು ಅವರನ್ನು ಮಾತಾಡಿಸದೆಯೇ, ಹಾಲಿನ ಬಟ್ಟ ಲನ್ನೂ ತಾಂಬೂಲದ ತಟ್ಟೆಯನ್ನೂ ಮೇಜಿನ ಮೇಲಿಟ್ಟು ಹಾಸಿಗೆಯ ಮೇಲೆ ಹೋಗಿ ಬಿದ್ದುಕೊಂಡೆ.

ನನ್ನ ಈ ವಿಚಿತ್ರವಾದ ನಡತೆ, ಅವರನ್ನು ಚಕಿತರನ್ನಾಗಿ ಮಾಡಿರ ಬೇಕು. ಬಂದು ನನ್ನ ಪಕ್ಕದಲ್ಲಿ ಕುಳಿತು ನನ್ನ ಮುಖವನ್ನು ನೇವರಿ ಸುತ್ತಾ "ಏನಾಯಿತೇ ಸೀತಾ ?" ಎಂದು ನನ್ನ ಕಣ್ಣಲ್ಲಿ ನೋಡುತ್ತಾ ಕೇಳಿದರು. ಅವರ ಮುಖದಲ್ಲಿಯ ದೈನ್ಯತೆ, ಪ್ರೀತಿ, ನನ್ನನ್ನು ಕ್ಷಣಮಾತ್ರ ಚಲಿಸಿತು....ಹೇಳಿ ಬಿಡೋಣವೇ ಎನ್ನಿಸಿತು ಮತ್ತೆ ಸ್ವಾಭಿಮಾನವೋ, ಅಥವಾ ಆ ನನ್ನ ಸಂಕುಚಿತ ಸ್ವಭಾವದ ಪರಿಚಯ ಅವರಿಗೆ ಮಾಡಿ ಕೊಡಲು ನನ್ನಲ್ಲಿದ್ದ ಸಂಕೋಚವೋ, ಮತ್ತೆ ನನ್ನನ್ನು ಮೌನವಾಗೇ ಇರಿಸಿತು.

"ಏನಾಯಿತೇ ಸೀತಾ? ಮೈ ಹುಶಾರಿಲ್ಲವೇನೇ ?" ಎಂದು ಮತ್ತೆ ಕೇಳಿದರು,

ಅವರು ಹಾಗೇ ಕುಳಿತಿದ್ದರೆ, ಅವರನ್ನು ಇನ್ನಷ್ಟು ನೋಡಬೇಕೆನ್ನಿ ಸಿತು. ನೋಡಿದಷ್ಟೂ ತೃಪ್ತಿಯಿಲ್ಲ. ಆದರೆ ಇಂದು ಆ ರೀತಿ ನೋಡು ವುದರಲ್ಲಿ ಯಾವುದೊ ಒಂದು ಅತೃಪ್ತಿ, ವೇದನೆ ತುಂಬಿತ್ತು

"ಏನೂ ಆಗಿಲ್ಲ. ನನಗೆ ನಿದ್ದೆ ಬರುತ್ತೆ." ನಮ್ಮ ಸಹಜೀವನದ ಆರಂಭದಿಂದ ಇಂತಹ ಪ್ರಸಂಗ ಇದೇ ಮೊದಲು. ಅಂತೇ ಅವರಿಗೂ ಏನು ಮಾಡಲೂ ತೋರಲಿಲ್ಲ. ನನ್ನ ವೇದನೆಯ ಕಾರಣ, ಒಂದಿಷ್ಟೂ ಅವರಿಗೆ ಹೊಳೆದಿಲ್ಲವಾದೀತು.

“ ಸೀತಾ, ಕಾರಣವಿಲ್ಲದೆಯೇ ಹೀಗೇಕೆ ಮಾಡುತ್ತೀ ನೀನು ? ಆದುದಾವರೂ ಏನೇ ? ”

“ ಏನೂ ಇಲ್ಲ. ದೀಪವಾರಿಸಿ. ನನಗೆ ನಿದ್ದೆ ಬರುತ್ತಿದೆ.” ನಮ್ಮವರು ಸುಮ್ಮನಾದರು. ದೀಪವಾರಿಸಿ ಬಂದು ಮಲಗಿದಾಗ ತನ್ನ ತೋಳಿನ ಮೇಲೆ ನನ್ನ ತಲೆಯನ್ನು ಇರಿಸಿದ್ದರು. ಹಾಗೇ ಅದನ್ನೇ ನೇವರಿಸುತ್ತಿದ್ದರು....ಅವರ ಆ ಹಿಡಿತದಲ್ಲಿ, ಸ್ಪರ್ಶದಲ್ಲಿ ಅಪೂರ್ವ ಸುಖವನ್ನನುಭವಿಸುತ್ತಿದ್ದರೂ, ಅಂದಿನ ಸಂಜೆಯ ಸಂಘಟನೆಗಳು ಎದ್ದು ಕಂಡಾಗಲೆಲ್ಲಾ ಜಿಗುಪ್ಸೆ ಮೂಡುತ್ತಿತ್ತು ಇಬ್ಬರೂ ಹಾಗೇ ಮಲಗಿದ್ದೆವು. ಅವರೆಡೆಗೆ ದೃಷ್ಟಿ ಮರಳಿದಾಗಲೆಲ್ಲ ನನ್ನ ಅಂತರ್ಯದ ಅಂದಿನ ಕಹಿಯನ್ನು ಹೇಳಿಬಿಡೋಣವೇ ಎನ್ನಿಸುತ್ತಿತ್ತು. ಆದರೆ, ಮತ್ತಾವುದೊ ಶಕ್ತಿ ನನ್ನನ್ನು ಹಿಂದೆಕ್ಕೆಳೆಯುತ್ತಿತ್ತು ಹೀಗಾಗಿ, ಬೇಸರದಲ್ಲಿ ಮಗ್ಗುಲು ಬದಲಿಸಿ ಹೊರಳಿದಾಗ“ನಿದ್ದೆ ಬಾರಲಿಲ್ಲವೇನೆ ಸೀತಾ? ಏನು ಆ ಯೋಚನೆ,ಹೇಳು?” ಎಂದರು. ಈ ಸಲ ಮೌನದಲ್ಲಿಯೇ ಮುಸುಗೆಳೆದು ಮಲಗಿಕೊಂಡೆ. ಅವರು ಸ್ವಲ್ಪ ಹೊತ್ತು ಹಾಗೇ ಇದ್ದು, ನಂತರ ಎದ್ದುಹೋಗಿ ಕಿಟಿಕಿ ಬಳಿ ಕುರ್ಚಿಯೊಂದನ್ನೆಳೆದುಕೊಂಡು ಕುಳಿತರು. ಇಟ್ಟ ಹಾಲು, ತಾಂಬೂಲ ಹಾಗೇ ಇತ್ತು. ಅವರ ಮುಖದಲ್ಲಿಯ ಆ ನೋವು, ಬೆಳದಿಂಗಳಲ್ಲಿ ಕಂಡಾಗ, ಎದ್ದುಹೋಗಿ, ಅವರನ್ನಪ್ಪಿ “ ಕ್ಷಮಿಸಿ, ನನ್ನ ಧೊರೆ !” ಎಂದು ನನ್ನ ಅವಿವೇಕವನ್ನು ಅವರ ಮುಂದೆ ತೋಡಿಕೊಳ್ಳಲಿ ಎಂದೆನಿಸುತ್ತಿತ್ತಾಗಲಿ, ಹಾಗೆ ನೋಡಲಾಗಲಿಲ್ಲ ಸಂಜೆಯ ಒಂದೊಂದು ಚಿತ್ರವೂ ಕಂಡಾಗ, ನನ್ನ ಊಹಾಪ್ರಪಂಚದಲ್ಲಿ ಮತ್ತಿಷ್ಟು ಅದನ್ನು ದೊಡ್ಡದಾಗಿ ಮಾಡಿಕೊಂಡು ರಾತ್ರಿಯೆಲ್ಲ ಅಳುತ್ತಲೇ ಇದ್ದೆ. ಜತೆಯಲ್ಲಿ ಓದುತ್ತಿದ್ದ ಹೆಣ್ಣೊಬ್ಬಳು, ತಾನಾಗಿ ಪಕ್ಕದಲ್ಲಿ ಕುಳಿತುಕೊಂಡು ಮಾತು ಬೆಳೆಸಿದಾಗ, ಆಕೆಯ ಬಗ್ಗೆ ಒಬ್ಬ ಗಂಡಸು ತೋರಿಸಬೇಕಾದ ಮರ್ಯಾದೆಯನ್ನು ತೋರಿಸಿ, ನಮ್ಮವರು ತನ್ನ ವ್ಯಕ್ತಿತ್ವವನ್ನು ನಿಲ್ಲಿಸಿಕೊಂಡರೆಂಬುದೇ ನನಗೆ ತೋರಲಿಲ್ಲವಾಗಲಿ, ಹೆಚ್ಚಿನ ವಿದ್ಯೆ ಕಲಿತ ಆಕೆಯ ಬಗ್ಗೆ ಅವರಿಗಿದ್ದ ಆದರವೇ ಹೆಚ್ಚಾಗಿ ಕಂಡಿತು....ಪೂರ್ಣ ವಿದ್ಯಾವಂತಳಲ್ಲವೆಂದು ನನ್ನ ಬಗ್ಗೆ ಉದಾಸೀನವಿದ್ದೀತೇ, ಎಂದು ಏನೆಲ್ಲ ಸಂಕುಚಿತ ಭಾವಗಳು ನನ್ನಲ್ಲಿ ಮೂಡುತ್ತಿದ್ದವು. ಯಾವಾಗ ನಿದ್ದೆ ಬಂತೋ....

೨

## ಮರುದಿನ

ಬೆಳಗಾದನಂತರ ಮುಂಜಾನೆಯೇ, ನಾನು ಕಾಫಿ ಕೊಡಲು ಎಬ್ಬಿಸುವ ತನಕ ಏಳದೆ ಮಲಗಿರುತ್ತಿದ್ದ ನಮ್ಮವರು ಆಗಾಗಲೇ ಎದ್ದಿದ್ದರು. ರಾತ್ರಿಯೆಲ್ಲ ಅವರು ಹಾಸುಗೆಯಲ್ಲಿ ಮಲಗೇ ಇರಲಿಲ್ಲ ! ಪಾಪ ! ಎಷ್ಟು ನೋಯಿಸಿದೆನು ಅವರನ್ನು !....

ವಾತಾವರಣವು ಬಿಗಿಯಾಗೇ ಇತ್ತು. ನನ್ನ ಮನಸ್ಸಿನಲ್ಲಿದ್ದ ಕಳಂಕವನ್ನು ಅವರ ಮುಂದಿಡಲು ಧೈರ್ಯ ಸಾಲಲಿಲ್ಲ ನನ್ನ ಮನಸ್ಸಿನ ಉದ್ವೇಗ ಅವರಿಗೆ ಸ್ವಲ್ಪವೂ ಅರಿವಾಗಲಿಲ್ಲ.. .

ಹೇಗೆ ತಿಳಿದೀತು ? ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ಕಣ್ಣುಗಳು ಕೆಂಪೇರಿದ್ದವು. ಅವರ ಸುಂದರ ಮುಖ ರಕ್ತಹೀನವಾಗಿತ್ತು. ಅವರು ಊಟದ ಶಾಸ್ತ್ರ ಮಾಡಿ ಆಫೀಸಿಗೆ ಹೊರಟುಹೋದರು. ಅವರು ಹೋದ ನಂತರ, ನನಗಿನ್ನೂ ಕಷ್ಟವಾಯಿತು. ಅವರ ಬಗ್ಗೆ ಮರುಕ ಹುಟ್ಟಿತು. ಅವರ ಸವಿನೋಟ, ಮಾತು, ನಗೆ, ಇವೇ ನನ್ನ ಜೀವಾಧಾರಗಳಾಗಿದ್ದವು ಆದರಿಂದು ನಾನು ಬಿಗುವಾಗಿದ್ದುದರಿಂದ, ಇವು ಯಾವುದೊಂದೂ ಇಲ್ಲದೆ ಅವರು ಹೊರಟು ಹೋಗಿದ್ದರು.

ಎಂತಹ ಅವಿವೇಕಿ ನಾನು ! ಬೇರೆ ಹೆಣ್ಣೊಬ್ಬಳು ಬದಿಯಲ್ಲಿ ಬಂದು ಕುಳಿತ ಮಾತ್ರಕ್ಕೆ, ಇಷ್ಟು ಸಂದೇಹ ಪಡಬೇಕೆ ? ಹಾಗೆ ಅವರಿದ್ದುದೇ ಆದರೆ, ಅವರ ಈ ನಿಷ್ಕಳಂಕವಾದ ವರ್ತನೆ, ಅತೀತವಾದ ಪ್ರೀತಿ ಹೇಗಿದ್ದೀತು ?....ಆಧಾರವಿಲ್ಲದ ಸಂದೇಹವೊಂದನ್ನು ದೊಡ್ಡದು ಮಾಡಿಕೊಂಡು ಆಜೀವ ಸುಖಕ್ಕೆ ತಿಲಾಂಜಲಿ ಕೊಡಲೆ ?

ನನ್ನ ಸುಖಕ್ಕೆ ನಾನೇ ತಡೆಗಟ್ಟುವುದೇ ? ಅಡ್ಡಗಾಲು ಹಾಕುವುದೇ ?

ಎಂತಹ ಮೌಢ್ಯ ? ಎಂತಹ ಸಂಕುಚಿತ ಪ್ರಕೃತಿ ನನ್ನದು ! ಹೀಗೇ ಯೋಚಿಸುತ್ತಾ, ಏನೂ ತೋರದೆ, ಅವರ ಮೇಜಿನಲ್ಲಿಯ ಹಳೆಯ ಕಾಗದಪತ್ರಗಳನ್ನಾದರೂ ಸರಿಪಡಿಸುವ ಎಂದು ಹೋದೆ. ಅವೆಲ್ಲ

ತೆಗೆಯುತ್ತಿರುವಾಗ ಅವರ 'ದಿನಚರಿ' ಪುಸ್ತಕಗಳು ಕಂಡುಬಂದವು. ಅವರ 'ದಿನಚರಿ'ಯ ಪುಸ್ತಕಗಳನ್ನು ನಾನು ನೋಡಲು, ಅವರು ಯಾವ ವಿಧವಾದ ಅಭ್ಯಂತರವಿರಿಸಿರಲಿಲ್ಲವಾಗಲಿ, ಅದರ ಬಗ್ಗೆ ಕುತೂಹಲ ವಿಲ್ಲದೆ ನಾನೇ ನೋಡಿರಲಿಲ್ಲ. ಅಂದೇಕೊ ನೋಡಬೇಕೆನ್ನಿಸಿತು....

ಅದು ಮೂರು ವರ್ಷದ ಹಿಂದಿನ ದಿನಚರಿ ....ತನ್ನ ಕಾಲೇಜಿನ ಮತ್ತು ಅಭ್ಯಾಸದ ಬಗ್ಗೆ ತುಂಬಿತ್ತು.... ಹಾಳೆ ತಿರುವುತ್ತಿದ್ದೆ.... ಅದರಲ್ಲಿ ಹೀಗಿತ್ತು:

" ಇಂದು ನನ್ನ ಬಾಳ ಗೆಳತಿಯ ದರ್ಶನ........

ಸೀತೆ.... ಸೀತೆ ... ಎಂತಹ ಪವಿತ್ರವಾದ ಹೆಸರು !........

ನನ್ನ ಸೀತೆಯಾಗಬಾರದೇಕೆ ?........"ಇನ್ನೂ ಏನೆಲ್ಲ ಬರೆದಿದ್ದರು ....... ಹೂಂ ನೆನಪಾಯಿತು. ಅವರು ನನ್ನನ್ನು ಮೊದಲನೆಯ ಬಾರಿ ಕಂಡ ದಿನ ಬರೆದಿದ್ದು. ನನ್ನ ಕುತೂಹಲ ಜಾಸ್ತಿಯಾಯಿತು....ಮತ್ತೆ ಹಾಳೆ ತಿರುವಿ ಹಾಕಿದೆ. ಅದು ನಮ್ಮ ಮದುವೆಯ ದಿನ ಬರೆದಿದ್ದೆಂದು ತೋರುತ್ತೆ.

" ಎಂತಹ ಪವಿತ್ರವಾದ ದಿನವಿದು ! ಸೀತೆ ನನ್ನವಳಾದ ದಿನ....

ಉದ್ವೇಗ ಉಲ್ಲಾಸಗಳು ದೇಹಾದ್ಯಂತವೂ ಆವರಿಸಿದೆ....

ಅಂತೇ ಇಂದು ನಿದ್ದೆ ಬಾರದು.... ಸೀತೆ !.... ನನ್ನ ಸೀತೆ....

ತನ್ನೆಲ್ಲವನ್ನೂ ಸಂಪೂರ್ಣ ವಿಶ್ವಾಸದಲ್ಲಿ ನನಗರ್ಪಿಸಿದ ನನ್ನ ಸೀತೆ ..........."

ಹೀಗೇ ಹೋಗುತ್ತಿತ್ತು ಅವರ ಬರವಣಿಗೆಯ ಧಾಟಿ. ಅವರು ಸೃಷ್ಟಿಸಿಕೊಂಡ ಮಧುರ ಪವಿತ್ರ ಬಾಂದವ್ಯದಲ್ಲಿ, ಇಂದು ನಾನೇನಾದೆ ?

ನನ್ನ ಸಂಶಯವೇ ಅವರಿಗೆ ಅರಿವಾದಲ್ಲಿ...........

ನನ್ನನ್ನು ಕ್ಷಮಿಸಲಾರರೆ ?........

ಅವರು ಬಂದನಂತರ ಕ್ಷಮಾಪಣೆ ಕೇಳಿಕೊಳ್ಳಲೇಬೇಕು. ನಮ್ಮ ಬಾಂದವ್ಯ, ಜೀವನ ಎಂದಿನಂತೆ ಮಧುರವಾಗಿ, ಕಲಕಲನೆ ಹರಿ ಯಲೇ ಬೇಕು....ಎಂದು ಉಕ್ಕಿಬರುತ್ತಿದ್ದ ಉದ್ವೇಗವನ್ನು ತಡೆಗಟ್ಟಿ, ಕಣ್ಣೊರಸಿಕೊಂಡು, ಸಂಜೆ ಅವರು ಬರುವ ವೇಳೆಗೆ ಕಾಫಿ ತಿಂಡಿಯನ್ನು ತಯಾರುಮಾಡಲು ಹೊರಟೆ.

ಅವರ ಕಾಲು ಸಪ್ಪಳ ಕೇಳಿದೊಡನೆಯೇ ಹೋದ ಪ್ರಾಣವು ಎದ್ದು ಬಂತು. ಎಂದಿನಂತೆ ನಸುನಗುತ್ತಲೇ ಹೋದೆ ಅವರ ಮುಂದೆ.

" ಅಬ್ಬ ! ಸರಿ ಹೋಯ್ತೇನೇ ಸೀತೆ ? ಇನ್ನೂ ಹಾಗೇ ಇರುತ್ತೀಯೇನೋ ಎಂದು ಗಾಬರಿಯಾಗಿತ್ತು " ಎಂದರು.

" ಹೇಗೆ ? " ಎಂದೆ ನಾಚುತ್ತಲೇ.

" ಮಹರಾಯ್ತಿ ! ನಿನ್ನೆ ರಾತ್ರಿಯಲ್ಲಿ ಯಾರ ಪುಣ್ಯಕ್ಕೆ ಜಾಗರಣೆಯಾಯ್ತು ಬಿಡು ! ಇಷ್ಟಕ್ಕೂ ಕಾರಣ ತಿಳಿಯಲಿಲ್ಲ. ಏನಾಯ್ತು ಸೀತೆ ? "

" ವೂಂ........ ಏನಿಲ್ಲ....... ನೆನ್ನೆ ಸಿನಿಮಾ ಪೂರ್ತಿ, ನೀವು ನನ್ನಲ್ಲಿ ಮಾತಾಡಲೇ ಇಲ್ಲ .. ಆಕೆ ಯಾರೋ ಪಕ್ಕದಲ್ಲಿ ಕೂತರೆ . '

" ಓಹೊ ! ಅದುವೆ ಸಮಾಚಾರ ! ಎಷ್ಟು ಹುಚ್ಚೀನೇ ಸೀತಾ ನೀನು ! "

" ಥೂ, ಮತ್ತೆ ಅಷ್ಟು ಹೊತ್ತೂ ಅವರ ತೋಳಿಗೆ ತೋಳು ತಾಕುವ ಹಾಗೆ ಕುಳಿತು....... ಮಾತು........ನಗೆ.... .. ನನಗೆ ಹೇಗೋ ಆಯಿತು! "

" ಅದಲ್ಲ ಸೀತೆ.... ಆ ಹೆಣ್ಣುಮಗಳೊಬ್ಬಳು ಬಂದು ಪಕ್ಕದಲ್ಲಿ ಕುಳಿತರೆ, ಕಂಡೂ ಕಾಣದ ಹಾಗೆ ಹೇಗೆ ಇರುವುದು ಹೇಳು? ಅದರಲ್ಲೂ ಜತೆಯಲ್ಲಿ ಓದಿದವಳು ಬೇರೆ ! ಆಕೆಗೆ ಒಂದಿಷ್ಟು ಧೈರ್ಯ, ದಾಕ್ಷಿಣ್ಯ ಜಾಸ್ತಿ. ಯಾರೊಡನೆಯೂ ಮಾತು ಹೆಚ್ಚು ಅದರಲ್ಲೂ ತಂತಮ್ಮ ಜೀವನೋಪಾಯವನ್ನು ತಾವೇ ಹುಡುಕಿಕೊಳ್ಳಬೇಕಾದ ಹೆಣ್ಣು ಮಕ್ಕಳಲ್ಲಿ, ನಿಮ್ಮಂತಹವರಿಗಿಂತ, ಒಂದಿಷ್ಟು ಧೈರ್ಯ ಜಾಸ್ತಿ ! ಹಾಗಾಗಿ ಹೆಣ್ಣುಗಂಡೆಂಬ ಭೇದವಿಲ್ಲದೆಯೇ ಮಾತು ಹೆಚ್ಚು....ಅಷ್ಟಕ್ಕೆ ಏನೇನೋ ಹುಚ್ಚು ಆಲೋಚನೆಯಲ್ಲಿ, ಅನ್ಯಾಯವಾಗಿ ನನಗೆ ಬಲು ಕಿರುಕೊಳ ಕೊಟ್ಟೆಯಲ್ಲೇ ! " ಎಂದರು ನಸುನಗುತ್ತಲೇ.

ನನಗೆ ತೀರ ಅವಮಾನವಾಯಿತಾಗಲಿ, ಹೃದಯ ಹಗುರವಾಯಿತು. ಅವರ ಹತ್ತಿರ ಹೋಗಿ ಭುಜದ ಮೇಲೆ ಕೈಯಿಟ್ಟು, ನನ್ನ ಕೆನ್ನೆಯನ್ನು ಅವರ ಕೆನ್ನೆಗೆ ಮುಟ್ಟಿಸಿದೆ....

" ಏನು ಸೀತಾ?" ಎಂದರವರು ನನ್ನ ಮುಖವನ್ನು ನಿಮುರುತ್ತಾ.

" ನನ್ನನ್ನು ಕ್ಷಮಿಸಿ ಧೊರೆ.... ಇನ್ನೆಂದಿಗೂ ಹೀಗಾಗುವುದಿಲ್ಲ. " ಎಂದೆ. ಗಂಟಲು ಬಿಗಿದಿತ್ತು. ಕಣ್ಣೀರು ಚಿಮ್ಮುತ್ತಿತ್ತು. ಕಣ್ಣೊರಸಿ ನಕ್ಕೆನ್ನಪ್ಪಿ " ಹುಚ್ಚಿ, ಇದಕ್ಕೆಲ್ಲಾ ಅಳುತ್ತಾರೇನೇ ? ಕ್ಷಮಿಸಲು ನೀನು ಮಾಡಿದ ತಪ್ಪಾದರೂ ಏನು ? " ಎಂದರು.

" ನಿಮ್ಮ ಬಗ್ಗೆ ಏನೆಲ್ಲ ಸಂದೇಹಪಟ್ಟೆ ! "

" ಸಂದೇಹವಲ್ಲ ನನ್ನ ಬಗ್ಗೆ ನಿನಗಿರುವ ಪ್ರೀತಿಯ ಆಧಿಕ್ಯತೆಯು ವ್ಯಕ್ತವಾಯಿತಷ್ಟೆ.... ಹೋಗು.... ಕಾಫಿ ತೆಗೆದುಕೊಂಡು ಬಾ.... ನನ್ನ ಸೀತೆ " ಎಂದರು

ಆ ದಿನ ರಾತ್ರಿ ಎಂದಿನಂತೆ ಹಾಲು, ತಾಂಬೂಲದೊಂದಿಗೆ ಮೇಲೆ ಹೋದೆ ಆಗಾಗಲೇ ನಮ್ಮವರು ಮಲಗಿದ್ದರು.

" ಅದೇನ್ರೀ.... ಹೊರಗಡೆ, ಬೆಳದಿಂಗಳೆಲ್ಲಾ ಅನ್ಯಾಯವಾಗಿ ಸುರಿದು ಹೋಗುತ್ತಿದೆ .......ಆಗಲೇ ಮಲಗಿಬಿಟ್ರಿ? " ಎಂದೆ, ಅವರ ಹೊದಿಕೆಯನ್ನು ತೆಗೆಯುತ್ತಾ.

" ಹೂಂ.... ನನಗೆ ನಿದ್ದೆ ...ಬಿಡು. "

" ಅದೆಂತಹ ನಿದ್ದೇನ್ರೀ ? "

" ನೆನ್ನೆ ನಿನಗೆ ಬಂದಂತಹ ನಿದ್ದೆ "

" ಸರಿ ಬಿಡ್ರಿ ! ಅದನ್ನೇ ನೆನಪು ತರಬೇಡಿ. ನಿಮ್ಮವಳು ಮಂಕು ದಿಣ್ಣೆ ನಿಜ! ಹಾಗೆಂದು ಅವಳನ್ನು ನೋಯಿಸಬೇಡಿ. ಏಳಿ....ತಾಂಬೂಲ ಹಾಲು, ನಿಮಗಾಗಿ ಕಾದಿದೆ !

" ............... "

" ............... "

" ಸೀತೇ, ದೀಪವಾರಿಸಿ ಮಲಗು. ನಿದ್ದೆ ಬರುತ್ತಿದೆ. "

ದೀಪವಾರಿಸಿ ಬಂದು ಮಲಗಿದೆ. ಚಂದ್ರನ ಬೆಳಕು ಕಿಟಕಿಯಿಂದ ಬಂದು ಒಳಗೆಲ್ಲಾ ಓಡಾಡುತ್ತಿತ್ತು. ನನಗೇನೋ ನೆನಪಾಗಿ ನಗು ಬಂತು. ಪಕ್ಕದಲ್ಲೇ ಮಲಗಿದ ನಮ್ಮವರು " ಏನೇ ಸೀತೇ, ಹಾಗೆ ನಗುತ್ತಿದ್ದೀ ? " ಎಂದರು.

" ನಿದ್ದೆಯೆಂದಿರಿ ನಾನು ನಗುವುದು, ನಿಮಗೆ ಕಂಡುಬಂದುದು ಹೇಗೆ ? "

“ ಕಳ್ಳನಿದ್ದೆ ಬಿಡು. ತಿಂಗಳ ಬೆಳಕಲ್ಲಿ, ‘ತನ್ನವರ’ ಬದಿಯಲ್ಲಿಯ ಸೀತೆಯ ಚೆಲುವು ಹೇಗಿರುತ್ತೆಂದು ನೋಡುತ್ತಿದ್ದೆ. ಅದಿರಲಿ, ನೀನು ನಕ್ಕಿದ್ದು ಏಕೆಂದು? ”

“ ಅಲ್ಲ ನೋಡಿ. ನಾ. ಕಸ್ತೂರಿಯವರ ಕಥೆಯೊಂದು ನೆನಪಾಯಿತು. ‘ ಗಂಡ–ಹೆಂಡತಿ ! ಒಂದೇ ಹಾಸಿಗೆ ! ಒಂದೇ ರಗ್ಗು ! ಇಬ್ಬರೂ ತೆಪ್ಪಗೆ ಮಲಗಿದ್ದರು .. ಇಬ್ಬರಿಗೂ ನಿದ್ದೆಯಿಲ್ಲ’ ಎಂದು.

“ ಹೂಂ, ಜಗಳ ಆಡಿದ್ದರೇನೊ ನಮ್ಮ ಹಾಗೆ, ಅವರೂ ಸಹ ! ನೆನ್ನೆ ನಮ್ಮ ಪಾಡೂ ಅದೇ ಆಗಿತ್ತಲ್ಲವೆ ? ”

“ ಹೂಂ ಅದಲ್ಲ........ ಎಲ್ಲ ಗಂಡಹೆಂಡತಿಯರೂ ಹಾಗೇನೇ ಎಂದು ನಗು ಬಂತಷ್ಟೆ ”

“ ಸೀತೆ, ಎಲ್ಲಾರ ಮನೆ ದೋಸೆ ತೂತೆ ! ನನಗೆ ಪ್ರಾಜ್ಞರೊಬ್ಬರು ಹೇಳಿದ್ದರು, ಪ್ರಣಯ ಕಲಹಗಳ ನಂತರ ಮಿಲನ ಒಲು ಸೊಗಸೆಂದು. ಹೌದೇನೇ ಸೀತಾ ? ” ಎಂದಾಗ ಅವರ ಹೃದಯದಲ್ಲಿ ಮುತ್ತು ಮರೆ ಮಾಡಿದೆ.

---

# ಅಂತಸ್ತಿನ ಅಂತರಂಗ ‡ ‡ ‡

೧

" ನೋಡ್ರಿ, ಆತ, -- ಮನೆಯಾತ— ಈ ದಿನವೂ ಬಂದಿದ್ದ. ಮೊದಲನೆಯ ತಾರೀಖಿನ ವೇಳೆಗಾದರೂ ಮನೆ ಖಾಲಿ ಮಾಡಲೇ ಬೇಕಂತೆ. ಇಷ್ಟು ಒಳ್ಳೆ ಮನೆ ಬಿಟ್ಟು ಹೋಗಬೇಕಂದರೆ ಕಷ್ಟವಲ್ಲವೆ?'' ಎಂದೆ, ನಾನು ನಮ್ಮವರಿಗೆ ತಿಂಡಿ ಕಾಫಿ ತಂದಿಟ್ಟು.

" ಮತ್ತೇನು ಮಾಡುವುದು ಸೀತೆ ? ಬಾಡಿಗೆ ಮನೆ. ಹೋಗೆಂದಾಗ ಹೋಗಲೇಬೇಕಲ್ಲವೆ ? " ಎಂದರು ನಮ್ಮವರು ಬಾಯಲ್ಲಿ ಹಲ್ವ ಹಾಕಿಕೊಳ್ಳುತ್ತಾ.

" ನಿಮ್ಮಂತಹ ನಿಧಾನಸ್ತರು ಸಿಕ್ಕಿದ್ದಾರೆಂತಲೇ ಆತ ಹಾಗೆ ತೊಂದರೆ ಕೊಡುವುದು. ಸ್ವಂತ ಮನೆ ಹಾಗೆ, ಎಷ್ಟೊಂದು ಹೂ-ಗಿಡಗಳನ್ನು ಬೆಳಸಿಯಾಯಿತು! ತೋಟ ಒಳ್ಳೇ ನಂದನವನದಂತಾಗಿದೆ ಹೇಗ್ರೀ ಬಿಟ್ಟು ಹೋಗುವುದು ? ಸಂಪಿಗೆ ಗಿಡದಲ್ಲಿ ಈಗೀಗ ಹೂಬಿಡುತ್ತಿದೆ. ಬರುವಾಗ ಮರಳು ಕಾಡಿನಂತಿತ್ತು. ಈಗ ತೋಟವನ್ನು ನೋಡಿದರೆ, ಎಂತಹವರಿಗೂ ಸಂತೋಷವುಕ್ಕಿಬರುತ್ತೆ. ಇಷ್ಟೆಲ್ಲ ಕಷ್ಟಪಟ್ಟು ಗಿಡಗಳನ್ನು ಬೆಳೆಸಿ, ತೀರ, ಕಷ್ಟದ ಫಲ ಅನುಭವಿಸುವ ವೇಳೆಗೆ, ಹೋಗೂ ಅಂತಾನಲ್ಲ, ಆ ಮಾರಾಯಾ !"

" ಚೆನ್ನಾಯಿತು ಬಿಡು. ಅಲ್ಲೇ, ಮನೆ ಆತನದು; ಆತನ ವಸ್ತುವಿನ ಮೇಲೆ ಆತನಿಗೇ ಹಕ್ಕಿಲ್ಲವೇ ? ಇನ್ನು ನಾವೆಲ್ಲಾದರೂ ಬೇರೆ ಮನೆ ನೋಡಲೇಬೇಕು. ''

" ಅದಲ್ಲಾಂದ್ರೆ ... ನಾವು ಹೋಗುವುದಿಲ್ಲಾಂದ್ರೆ ಏನು ಮಾಡಬಲ್ಲ ? ಹೆಚ್ಚೆಂದರೆ ಕೋರ್ಟಿಗೆ ಹೋಗುತ್ತಾನೆ ನಿಮಗದೇನು ಹೊಸತಲ್ಲ ಕೋರ್ಟಿಗೆ ಹೋಗಲಿ ಬಿಡಿ ! ನೋಡುವ ನಿಮ್ಮ ಚಾಕಚಕ್ಯ. ವಕೀಲಿ ವೃತ್ತಿಯಲ್ಲಿ ! ಈ ಮನೆ ಗಟ್ಟಿಮಾಡಿಸಿಕೊಂಡೇ ಬನ್ನಿ "

" ರಾಮರಾಮಾ ! ಆ ಕೆಲಸ ಮಾತ್ರ ಬೇಡ. ದಿನ ಬೆಳಗಾದರೆ, ಯಾವ ಪುಣ್ಯಾತ್ಮನ ವ್ಯವಹಾರವೆಲ್ಲಾ ಕಟ್ಟಿಕೊಂಡು ಕೋರ್ಟು ಸುತ್ತು

ವುದಾಗಿದೆ ಇನ್ನು ನನ್ನ ಪುರಾಣ ಬೇರೆ... ಬಲೆ ಒಳ್ಳೆ ಜಾಣೆ ಕಾಣೆ ನೀನು. ! ಬೆಂಗಳೂರು ಪೇಟೇಲಿ ಮನೆ ಸಿಗುವುದಿಲ್ಲವೇನು ? ''

'' ನೀವು ಹೀಗೆ ಹೇಳುತ್ತೀರೆಂದು ನನಗೆ ಗೊತ್ತಿತ್ತು ಬಿಡಿ ! ಅಂತಸ್ತುಗಳ ಮನೆಗಳು .. ಮೊನ್ನೆ ಸರೋಜಮ್ಮ ಹೇಳಿದರು. ನೋಡಿ. ಬರೋಣವೇನು ? ''

'' ನೋಡು ಸೀತೆ, ಆ ಅಂತಸ್ತುಗಳ ಮನೇಲಿದ್ದರೆ, ನಮ್ಮ ಪಾಡಿಗೆ ನಾವು ಗುಟ್ಟಾಗಿರಲಿಕ್ಕಿಲ್ಲ; ಒಳ್ಳೆ ಸಂತೇಲಿದ್ದ ಹಾಗೇ ಇರುತ್ತೆ. ''

'' ಇಲ್ರೀ, ಬಹಳ ಚೆನ್ನಾಗಿವೆಯಂತೆ. ಹೊಸ ಕಟ್ಟಡಗಳಂತೆ ಹೇಗೂ ಕೆಲಸವೆಲ್ಲ ಆಗಿದೆ. ನೋಡಿಕೊಂಡು ಬರೋಣ ಬನ್ನಿ. '' ಎಂದೆ.

'' ಹೂಂ, ನಡಿ ಅಮ್ಮಾವರ ಆಜ್ಞೆ. ''

'' ನೋಡಿ, ಹಾಗೆಂದರೇನೇ ನನಗೆ ಸಿಟ್ಟು ಬರುವುದು ! ಇದು ನನ್ನ ಆಜ್ಞೆ ಏನಲ್ಲ. ಈ ಮನೆಯ ಮಹಾಶಯನ ಉಪಕಾರಾನ್ನಿ. ಈ ಮನೆಗೆ ಬಂದಾಗಲಿಂದ, ಮನಸ್ಸಿಗೂ ಚೆನ್ನಾಗಿದೆ ಆಗಿಬಂದ ಮನೆ. ಒಂದು ದಿನ ಒಂದು ಜಗಳವಿಲ್ಲ. ''

'' ಯಾಕಿಲ್ಲ ? ಆ ದಿನ ಸಿನಿಮಾಗೆ ಹೋಗಿಬಂದು, ಮಾರಾಯ್ತಿ ಎರಡುದಿನ ಗೋಳಾಡಿಸಿದೆ ... ''

'' ಬಿಡ್ರಿ. ಏನೆಲ್ಲ ನೆನಪು ಮಾಡ್ತೀರಿ !.... ಮಾತಾಡುತ್ತಾ ಇದ್ದರೆ ಕತ್ತಲಾಗುತ್ತೆ.... ಬನ್ನಿ ಹೋಗಿ ಬರೋಣ '' ಎಂದು ಗಾಂಧಿನಗರದ ಮನೆಗಳ ಸಂದರ್ಶನಕ್ಕೆ ಹೊರಟೆವು.

೩

ಗಾಂಧೀನಗರದಲ್ಲೇ ಮನೆಯೊಂದನ್ನು ನೋಡಿ ಬಂದು, ಅಲ್ಲಿಗೇ ಹೊರಡಬೇಕೆಂದೂ ನಿಶ್ಚಯಿಸಿದೆವು. ಮೂರು ಅಂತಸ್ತಿನ ಮನೆ. ಹೊಸ ತಾಗಿ, ಬಣ್ಣ ಕೊಟ್ಟು, ಬಹಳ ಚೆನ್ನಾಗಿ ಕಾಣುತ್ತಿತ್ತು. ಮನೆಯಮುಂದೆ ಇದ್ದ ಮೂರುಗಜ ಜಾಗಕ್ಕೂ ಸಿಮೆಂಟ್ ಹಾಕಿದ ಕಾರಣ,ಗಿಡಗಳನ್ನು, ತೊಟ್ಟಿಗಳಲ್ಲಿ ವಿನಃ ನೆಲದ ಮೇಲೆ ಬೆಳೆಸಬಹುದಾದ ಆಶೆಯನ್ನೂ ಬಿಡಬೇಕಾಗಿತ್ತು. ಆದರೂ ಮನೆ ಮಾತ್ರ, ಹೊಸ ಬಣ್ಣದಲ್ಲಿ ಮೂರು ಅಂತಸ್ತುಗಳ ಎತ್ತರದಲ್ಲಿ ಠೀವಿಯಾಗಿ, ಸರಿಗೆರುಮಾಲಿನ ದೊಡ್ಡ

ಮನುಷ್ಯರಂತೆ ಬಹಳ ಗಂಭೀರವಾಗಿ, ಡೌಲಾಗಿ ಕಾಣುತ್ತಿತ್ತು.

" ಚೆನ್ನಾಗಿದೆ ಅಲ್ಲವೇನ್ರೀ ಬೊಂಬಾಯಿ ಮನೆಗಳ ಹಾಗೆ ? " ಎಂದೆ ನಾನು

" ಹೂಂ " ಎಂದರು ನಮ್ಮವರು, ಅಷ್ಟೇನೂ ಉತ್ಸಾಹವನ್ನು ತೋರದೆಯೆ.

ಭಾನುವಾರವಾಗಿದ್ದರಿಂದ ಆ ದಿನವೇ ಅಂತಸ್ತಿನ ಮನೆಯನ್ನು ಸೇರಿದೆವು ಸೇರಿದ ದಿನವೆಲ್ಲಾ ಸಾಮಾನು ಅಣಿಮಾಡಿಕೊಳ್ಳುವುದರಲ್ಲೇ ಸರಿಹೋಯಿತು ನಮ್ಮವರಂತೂ, ಹರಕೆಯಲ್ಲಿ ತಿರುಪತಿ ದೇವರಿಗೆ ತುರುಬನ್ನು ಮುಡುವಾಗಿ ಕೊಟ್ಟುಬಂದ ಹೆಣ್ಣಿನಂತೆ, ಸಪ್ಪಗೇನೇ ಓಡಾಡುತ್ತಿದ್ದರು. ದೇವರ ಪುಣ್ಯವೆಂದು, ನಮ್ಮ ಪಾಲಿಗೆ ತಳಭಾಗವೇ ಖಾಲಿಯಾಗಿದ್ದುದರಿಂದ, ನನಗೇನೋ ಮನೆ ಒಪ್ಪಿತ್ತೆಂದಲೇ ಹೇಳ ಬಹುದು. ಮೇಲಿನ ಎರಡು ಮಹಗಳಲ್ಲೂ, ಯಾರವೋ ಬೇರೆ ಸಂಸಾರವಿದ್ದವು. ಇನ್ನು ಆಗಾಗಲೇ ಸೇರಿ ಸಾಮಾನೆಲ್ಲಾ ಅಣಿಮಾಡಿ ಕೊಳ್ಳುವುದರಲ್ಲೇ ಇದ್ದುದರಿಂದ ಅವರ ಬಗ್ಗೆ ತಿಳಿಯಲು ಅವಕಾಶ ವಾಗಲಿಲ್ಲ.

ಸಾಮಾನು ಇಡುತ್ತಲೇ ಇದ್ದೆ.

" ರೀ, ಇದೇನೊಂದ್ರೆ ಕಟ್ಟಿಗೆ, ಇದ್ದಿಲು ಹಾಕಿಕೊಳ್ಳಲು ಜಾಗವೇ ಇಲ್ಲ ! ಇವೆಲ್ಲಾ ಅಡಿಗೆಮನೆಯಲ್ಲಿ ಇಟ್ಟುಕೊಳ್ಳಲು ಸಾಧ್ಯವೇ? "

" ಬಾತ್ ರೂಮಿನಲ್ಲೇ ಇಟ್ಟುಕೊಂಡರಾಯಿತು ಸೀತೆ. " ಎಂದರು ನಮ್ಮವರು, ಸ್ವಾಭಾವಿಕ ನಿಧಾನದಿಂದಲೇ

" ಚೆನ್ನಾಯಿತು ಬಿಡಿ. ಆ ಬಾತ್ ರೂಮೂ ಇರುವುದು ಮೂರಡಿ "

" ಇದೇನೇ ಸೀತೆ, ಸೇರುತ್ತಲೇನೇ ಗೊಣಗಾಟಕ್ಕೇ ಪ್ರಾರಂಭಿ ಸಿದೆ ! ನೋಡು, ಈ ಮನೆಗಳಲ್ಲಿ, 'ಎಲಿಕ್ಟ್ರಿಕ್ ಹೀಟರ್ಸ್' ಇಟ್ಟುಕೊಳ್ಳ ಬೇಕು. "

" ಸರಿ, ಈಗ ಅದೆಲ್ಲಿ ಕೊಂಡುಕೊಳ್ಳುವುದು, 'ಕೌಪಿನಾರ್ಥೇ ಮಾರ್ಜಾಲಂ' ಎಂಬಂತೆ ! "

" ................ "

" ರೀ, ...ಇಲ್ಲಿ ಸ್ವಲ್ಪ ಬನ್ರೀ ಈ ಮೊಳೆ ಇಲ್ಲಿ ಹೊಡೆದು ಕೊಡ್ರಿ. ನನ್ನ ಕೈಲಂತೂ ಆಗಲಿಲ್ಲ" ಎಂದೆ, ಅಡಿಗೆಮನೆಯಲ್ಲಿ ತಟ್ಟೆಸ್ಟ್ಯಾಂಡ್‌ನ್ನು ಹಾಕಲು ಮೊಳೆ ಹೊಡೆಯಲು ಪ್ರಯತ್ನಿಸುತ್ತಾ. ನಮ್ಮವರಿಗ ಏಕೋ ಆಗಲೇ ಸ್ವಲ್ಪ ಬೇಜಾರಾದ ಹಾಗಿತ್ತು ಹಾಗೇ ಎದ್ದು ಬಂದರು.

" ಟಪ್ ಟಪ್ ಟಪ್ " ಎಂದು ಸುತ್ತಿಗೆಯನ್ನೇ ತೆಗೆದುಕೊಂಡು ಹೊಡೆಯಲು ಪ್ರಾರಂಭ ಮಾಡಿದರು ಅಲ್ಲೇ ಓಡಾಡುತ್ತಿದ್ದ ಮನೆ ಯಜಮಾನ ಬಂದು. "ಏನ್ರೀ ರಾಯ್ರೆ, ಗೋಡೆಗೆ ಮೊಳೆಗಳ ಹೊಡೀಬೇಡಿ ಗೋಡೆ ಹಾಳಾಗ್ತದೆ " ಎಂದ ಸ್ವಲ್ಪ ಜೋರಾಗೇ.

ನಮ್ಮವರು ಸುತ್ತಿಗೆ ಮೊಳೆ ಎರಡೂ ಕೆಳಗೆ ಹಾಕಿ ಹೊರಟೇ ಹೋದರು ಮುಖ ಕೆಂಪೇರಿತ್ತು, ಹಣೆಯಲ್ಲಿ ಬೆವರೂರಿತ್ತು. ಅವರಿಗ ತೀವ್ರವಾದ ಸಿಟ್ಟೇ ಬಂದಿತ್ತು ನಾನಿನ್ನು ಮಾತನಾಡದೆ ಹಾಗೇ ಎಲ್ಲ ವನ್ನೂ ಚೊಕ್ಕಟಮಾಡಿ, ಒಡನೆಯೇ ಕಾಫಿ ತಯಾರುಮಾಡಿ, ನಮ್ಮವ ರಿಗೆ ಕೊಟ್ಟು, ಒಂದು ಕುರ್ಚಿ ಎಳೆದುಕೊಂಡು ಅವರ ಬಳಿಯಲ್ಲೇ ಕುಳಿತೆ. ನಮ್ಮವರು ಸ್ವಾಭಾವಿಕವಾಗೇ ಮೌನಮೂರ್ತಿ— ಇನ್ನು ಸಿಟ್ಟು ಬಂದಾಗಲಂತೂ ಶಿಲಾಮೌನವೇ ಅವರದು ಅವರ ಕಿರುನಗೆ ಯಲ್ಲಿ ಚೆಲುವನ್ನು ಕಂಡುಂಡ ನಾನು ಆ ಶಿಲಾಮೌನದಲ್ಲೂ ಒಂದು ಸೊಬಗನ್ನೇ ಅನುಭವಿಸುತ್ತಿದ್ದೆ. ನಾನು ಎಂದಿನಂತೆ ಹಾಸ್ಯಮುಖಿಯಾಗೇ " ಅದಲ್ರೀ, ಅಡಿಗೆಮನೆಯಲ್ಲಿ ತಟ್ಟೆಗಿಟ್ಟೆ ಇಂತಹುವೆಲ್ಲಾ ಇಟ್ಟು ಕೊಳ್ಳಲು ಹೇಗ್ರೀ? ಮೊಳೆ ಹೊಡೆಯಲು ಹೋದರೆ, ಮೊಳೆ ಬಗ್ಗುತ್ತಾ ಗಲಿ,.... "

" ಲೇ ಸೀತೇ, ನೀನು ಒಳೇ ಹಳ್ಳೀಗಮಾರು ಕಾಣೆ ! ಅದೆಲ್ಲಾ ಹಳೇಕಾಲದ ಪದ್ಧತಿ. ಅವನ್ನೆಲ್ಲಾ ಇಟ್ಟು ಕೊಳ್ಳಲು ಒಂದು 'ಡಿನ್ನರ್ ವಾಗನ್' ಇರಬೇಕು "

" ಕೊಳ್ಳೋಣ್ವೇನು ? ಬೆಲೆ ಎಷ್ಟಾದೀತು ? "

" ಏನು ಮಹಾ ! ನೂರು ನೂರೈವತ್ತು ಆದೀತು ಇಂತಹ ಮನೆ ಗಳಲ್ಲಿ ಅವುಗಳೆಲ್ಲಾ ಇದ್ದರೇನೇ ಸರಿ ನೋಡು. "

" ಸರಿಸರಿ, ಬೇಡ ಬಿಡಿ. ಹಾಗೇ ಹೇಗಾದರೂ ಸರಿ ಮಾಡಿಕೊಳ್ಳು ತ್ತೇನೆ. ನೀವೇಕೊ ಒಂದು ಬಗೆಯಿದ್ದೀರಿ. ನಾನು ಅಡಿಗೆಮಾಡುವಷ್ಟರಲ್ಲಿ

ನೀವೆಲ್ಲಾದರೂ ಹಾಗೇ ಸುತ್ತಾಡಿಕೊಂಡು ಬನ್ನಿ. ''

" ಹೌದೆ ಸೀತೆ, ಹೊರಗೆ ಹೋಗಿ ಬಂದರೆ ಸರಿ ಹೋದೀತು. ಏಕೊ, ಈ ಮನೇಲಿ ಬಹಳ ಗದ್ದಲವಿದ್ದಹಾಗಿದೆ, ಅಲ್ಲವೆ ? ಮಧ್ಯಾಹ್ನ ದಿಂದ ಒಂದೇ ಸವನೆ ಕೆಲಸ ಮಾಡುತ್ತಲೇ ಇದ್ದೀ,.... ಪಾಪ.... ನೀನೂ ಬಾ. "

" ನಾನು ಬಂದರೆ ಹೇಗೆ, ಹೇಳಿ? ಇನ್ನೂ ಅಡಿಗೆ ಸಹ ಆಗಲಿಲ್ಲ."

" ಬೇಡ ಬಿಡು. ಎಲ್ಲಾದರೂ ಹೋಟ್ಲಲ್ಲಿ ತಿಂದು ಬರೋಣ ಈ ದಿನಕ್ಕೆ "

" ಬೇಡ. ಮನೆಯಲ್ಲಿ ಕುಳಿತು ಇಬ್ಬರೂ ನಿಧಾನವಾಗಿ ಹರಟುತ್ತಾ ಊಟ ಮಾಡಿದ ಹಾಗೆ ಇರುವುದಿಲ್ಲ. ನೀವು ಹೋಗಿ ಬನ್ನಿ ಆದರೆ ನೋಡಿ, ಬೇಗ ಬರಬೇಕು. ಸಿಗರೇಟ್ ಸೇದುತ್ತಾ, ಆ ಸಪ್ಪೆ ಮುಖದ ತಂಗಮ್ಮನೊಟ್ಟಿಗೆ ಮಾತಾಡುತ್ತಾ ನಿಂತರೆ, ಸೀತೇಯನ್ನು ಮರೆತೇ ಬಿಡ್ತೀರಿ ನೀವು ! "

" ಲೇ ಸೀತಾ, ಯಾಕೋ ನಿನ್ನ ಧೋರಣೆ ಸರಿಯಾಗಿಲ್ಲ ನೋಡು. ಮೊದಲೇ ಈ ಅಂತಸ್ತಿನ ಮನೆಯ ವಾತಾವರಣ ನನಗಂತೂ ಹಿತವಾಗಿಲ್ಲ. ಅದರೊಟ್ಟಿಗೆ ನಿನ್ನ ಈ ಧೋರಣೆ ಬೇರೆ.... "

" ಹೂಂ, ಹೇಗಿರುತ್ತೆ ಹೇಳಿ ? "

" ನೀನೇ ಹೇಳು, ಸಾಮ್ಯಗಳ ಜೋಡಣೆಯಲ್ಲಿ ನೀನು ಜಾಣೆಯಲ್ಲವೆ ? ಈ ಮನೇಲಂತೂ ನಮ್ಮ ಸಂಸಾರ,...."

" ಜಾಮೂನ್‌ನಲ್ಲಿ ಜಿರಳೆ ಕಂಡ ಹಾಗಿರುತ್ತೇನು ? " ಎಂದೆ ನಾನು ನಗುತ್ತಾ. "

" ಹುಂ ಅನ್ನಿ. ಈ ಮನೇಲಿ ಬಹಳ ದಿನ ಇರಲಾರೆವೆಂದು ನನಗನಿಸುತ್ತೆ. "

" ಚೆನ್ನಾಯ್ತು ಬಿಡಿ, ಏಳು ಮನೆ ಬೀಲಿಗಳ ಹಾಗೆ ಎಷ್ಟು ಮನೆ ಬದಲಾಯಿಸುವುದು ? ಇನ್ನೂ ಈ ಮಧ್ಯಾಹ್ನ ತಾನೆ ಇಲ್ಲಿಗೆ ಬಂದು, ಈಗೇಕೆ ಬೇರೆ ಮನೆ ಯೋಚನೆ ? "

" ಹೂಂ, ನೋಡೋಣ. ನನಗಿಂತ ಮುಂಚೆ, ನೀನೇ 'ಮಕಾಂ'

ಎತ್ತ ಬೇಕೆನ್ನುತ್ತೀ ನೋಡು.... ''

" ಓಹೋ! ವಕೀಲಿ ಕೆಲಸ ಜತೆಗೆ, ಜ್ಯೋತಿಷ್ಯ ಬೇರೆ ಕಲಿತಿದ್ದಾರೆ! ಇರಲಿ, ಬೇಗ ಬಂದು ಬಿಡಿ. ''

* * * *

ಆ ರಾತ್ರಿ.

ಊಟ, ಕೆಲಸ ಕಾರ್ಯಗಳೆಲ್ಲಾ ಮುಗಿಯುವ ವೇಳೆಗೆ, ಸುಮಾರು ಹತ್ತು ಗಂಟೆಯಾಗುತ್ತಾ ಬಂದಿತ್ತು. ಆ ಹೊತ್ತಿಗಾಗಲೇ ನಮ್ಮವರು ಮಲಗುವ ಸನ್ನಾಹ ಮಾಡುತ್ತಿದ್ದರು ನಾನು " ಏನ್ರೀ, ರೇಡಿಯೋ ಫಿಟ್ ಅಪ್ (fit up) ಮಾಡುವುದಿಲ್ಲವೇನು ? '' ಎಂದೆ.

" ಇಬ್ಬದಿಯ ಮನೆಗಳಲ್ಲೂ ರೇಡಿಯೋ, ಕಾಫಿ ಹೊಟೇಲುಗಳಲ್ಲಿ ಇಟ್ಟಂತೆ, ಗಟ್ಟಿಯಾಗೇ ಇಟ್ಟಿದ್ದರು. ಒಂದು ಕಡೆ ಸಿಲೋನಿನ ಸಿನಿಮಾ ಹಾಡುಗಳಾದರೆ, ಮತ್ತೊಂದು ಕಡೆ ಪೆರುನ್‌ಭೂತ ಭಾಗವತರು ಸ್ವರ ಗಳೊಡನೆಯೆ ಕಸರತ್ತು ನಡೆಸುತ್ತಿದ್ದರು ನಿಶ್ಶಬ್ದ, ಶಾಂತ ವಾತಾವರಣ ಪ್ರೇಮಿಗಳಾದ ನಮ್ಮವರ ಮುಖ, ಈ ಸಂಗೀತ ಶಬ್ದ ಗೊಂದಲ ದಾಂಧಲೆಯಲ್ಲಿ, ನೂರಾರು ಹುಲಿಗಳ ಚೀರಾಟವನ್ನು ಕೇಳಿದ ಜಿಂಕೆ ಮರಿಯ ಮುಖಲಕ್ಷಣಗಳನ್ನೇ ತಾಳಿತ್ತು ನನಗೆ ಅಯ್ಯೋ ಪಾಪ ಅನಿಸಿ ತುಸು ನಗೆಯೂ ಬಂತು

" ಸೀತೇ, ನೀನು ಬಲೆ ಜಾಣೆ ಕಣೆ ! ಬುದ್ಧಿ ಎಂದರೆ ಹೀಗೇ ಇರಬೇಕು ನೋಡು. ಎಂತಹ ಮನೆಯನ್ನಾರಿಸಿದೆ ! ರೇಡಿಯೋ ಹಾಕಿ ಕೊಂಡರೆ ಆಗಬಹುದಾದ ಎಲೆಕ್ಟ್ರಿಕ್ ಬಿಲ್ಲಿನ ಹಣವೂ ಮಿಕ್ಕಿತು. ರೇಡಿಯೋ ಸಂಗೀತವೂ ಕೇಳಿದ ಹಾಗಾಯಿತು ಎಂತಹ ಮನೆ ! ''

" ಅದೇನ್ರೀ. ಹಾಗೆ ಹೀಯಾಳಿಕೆಯ ಮಾತು ! '' ಎಂದೆ. ಅವರ ಕಿರುನಗೆಯೇ ಅವರು ನನಗಿತ್ತ ಉತ್ತರ. ಇನ್ನೂ ಹಾಸಿಗೆ ಮೇಲೆ ಹಾಗೇ ಒರಗಿದೆ ಮಧ್ಯಾಹ್ನದಿಂದ ಮನೆಯ ಸಂವರಣದಲ್ಲಿ ದೇಹವೆಲ್ಲಾ ತೀರ ಬಳಲಿತ್ತು. ಹಾಗೇ ನಿದ್ದೆ ಬಂತು. ಮೇಲಿನ ಮನೆಯವರ ಓಡಾಟ, ಪಕ್ಕದ ಮನೆಯ ರೇಡಿಯೋ ಯಾವುದೊಂದೂ ಲೆಕ್ಕಿಸದೆ, ನಾನಂತೂ

ಮಲಗೇ ಬಿಟ್ಟೆ.

" ಪಿಯಾ ಮಿಲನ ಕೋ ಜಾನಾ ".. ಎಲ್ಲೋ ಕೇಳಿ ಬರುತ್ತಿತ್ತು ಹಾಡು. ಯಾರಪ್ಪಾ ಹಾಡಿದ್ದು ?. ಹೂಂ . ಪಂಕಜ ಕುಮಾರ್ ಮಲ್ಲಿಕ್. ಅರೆ ಇದೇನು, ಸಿನಿಮಾಲಿ, ಹೀಗೆ ನಿದ್ದೆ ಮಾಡುತ್ತಿದ್ದೇನೆ .... ಪಕ್ಕದಲ್ಲಿ ನಮ್ಮವರು ಏನೆಂದಾರು ? . ಎಂದೆಂದುಕೊಂಡು, ಬಲ ವಂತದ ಪ್ರಯತ್ನದ ಮೇಲೆ ಕಣ್ಣುಬಿಟ್ಟೆ ಹಾಸಿಗೆ ಮೇಲಿದ್ದ ನಾನು ಸುತ್ತೂ ನೋಡಿದಾಗ ಎಲ್ಲಿದ್ದೇನೆಂದು ಸಹ ತಿಳಿಯಲಿಲ್ಲ. ನಿದ್ದೆಯ ಜೊಂಪು ಇನ್ನೂ ಇಳಿದಿರಲಿಲ್ಲ "ಏನ್ರೀ, ಎಲ್ಲಿದ್ದೇವೆ ನಾವು ? " ಎಂದೆ.

" ಅದೇನೇ ಸೀತೆ ? ಅಂತಸ್ತಿನ ಮನೆಯಲ್ಲಿದ್ದೇವೆ ಏನಾದರೂ ಕನಸು ಕಂಡೆಯೇನು ?"

ಹೂಂ, ಈಗ ನೆನಪು ಬಂತು. ಕಣ್ಣುಜ್ಜಿಕೊಂಡು ಎದ್ದು ಕುಳಿತೆ. ನಮ್ಮವರು ಕಿಟಕಿ ಬಳಿ ನಿಂತಿದ್ದರು ಇನ್ನೂ ನನಗೆ ನಿದ್ದೆಯಲ್ಲಿ ಕೇಳು ತ್ತಿದ್ದ ಹಾಡು ಮುಂದುವರಿಯುತ್ತಲೇ ಇತ್ತು. ಆ ಅರೆನಿದ್ದೆಯಲ್ಲಿ ಕೇಳಿ ಬರುತ್ತಿದ್ದ ಹಾಡು, ನಾನೆಲ್ಲೋ ಸಿನಿಮಾದಲ್ಲಿ ಕುಳಿತಿದ್ದೇನೆಂಬ ಭಾವನೆಗೆ ಕಾರಣವಾಗಿತ್ತು.

" ಎಷ್ಟೀ ಗಂಟೆ ? " ಎಂದೆ.

" ಹನ್ನೆರಡಾಗುತ್ತ ಬಂತು "

" ಈ ಮಧ್ಯರಾತ್ರಿಯಲ್ಲೇನು ಬಂತ್ರೀ, ಈ ಸಂಗೀತ ? ನಿದ್ದೆ ಬೇಡವೆ ? "

" ಯಾರೋ ಪಾಪ, ಪೂರಾ ಸಂಗೀತಾಭಿಮಾನಿಗಳೂಂತ ಕಾಣುತ್ತೆ, ರೇಡಿಯೋ ಕೇಂದ್ರಗಳೆಲ್ಲಾ ಕ್ಲೋಸ್ ಆಗಿದ್ದರೂ ಗ್ರಾಮೋಫೋನ್ ಹಾಕಿಕೊಳ್ಳುತ್ತಿದ್ದಾರೆ ! "

" ಒಳ್ಳೇ ಸಂಗೀತ, ಒಳ್ಳೇ ಅಭಿಮಾನ ! ಈ ರಾತ್ರಿಯಲ್ಲಿ ಈ ಸಿನಿಮಾ ಹಾಡುಗಳು ಯಾರಿಗೆ ಬೇಕ್ರಿ? ಹೀಗಾದರೆ ಹೇಗೆ? ರಾತ್ರಿಯೆಲ್ಲಾ ನಿದ್ದೆಗೆಟ್ಟರೆ ಆರೋಗ್ಯ ಏನಾಗಬೇಕು ? "

" ಅಭ್ಯಾಸ ಆದರೆ ಸರಿ ಹೋಗುತ್ತೆ ಬಿಡು "

" ನೀವೇನು ಮಲಗುವುದೇ ಇಲ್ಲವೇನು ? ಏನ್ರೀ, ಕವಿಗಳಂತೆ, ಆಕಾಶ ನಕ್ಷತ್ರಗಳ ಸೌಂದರ್ಯವನ್ನು ಹೃದಯದಲ್ಲಿ ತುಂಬುತ್ತಿದ್ದೀರೇನು

ಕಿಟಿಕಿಯ ಬಳಿ ನಿಂತು ! ” ಎಂದೆ.

‘ ಸರಿ ಬಿಡು. ಕಿಟಿಕಿಯಿಂದ ಆಕಾಶ ಬೇರೇ ಕಾಣುತ್ತೆ ಎಂದು ತಿಳಿದಿದ್ದೀಯೇನು ? ಪಕ್ಕದ ಮನೆ ಸಹ ಮೂರು ಅಂತಸ್ತಿನದೇ ತಾನೆ ! ಆಕಾಶವೆಲ್ಲಿಂದ ಕಾಣಬೇಕು !” ಎಂದರು ನಮ್ಮವರು ಅತೃಪ್ತಿಯಿಂದ. ನನಗಂತೂ ನಿದ್ದೆ ತೀರ ಆವರಿಸಿತ್ತು. ಆಕಳಿಸುತ್ತಾ ಹಾಗೇ ಪಕ್ಕಕ್ಕೆ ಹೊರಳಿದೆ.

* * * *

## ಮೂರನೆಯ ದಿನ ಮುಂಜಾನೆ

ನನ್ನ ಅಭ್ಯಾಸದ ಪ್ರಕಾರ ಮುಂಜಾನೆಯೇ ಎದ್ದು ನಮ್ಮವರಿಗೆ ಬೆಡ್ ಕಾಫಿ (Bed Coffee)ಮಾಡಲು ಅನುವಾದೆ ಹಾಲನ್ನು ತೆಗೆದು ಕೊಳ್ಳಲು ಹೊರಗೆ ಬಂದು, ಹಾಲಿನ ಪಾತ್ರೆಯನ್ನು ಹಿಡಿದೆ. ಹಾಲಿ ನವನು ಹಾಲು ಹಾಕುತ್ತಿರುವಾಗಲೇ, ಮೇಲಿನಿಂದ ಒಡಒಡನೆ ನೀರು ಹಾಲಿನಲ್ಲಿ ಬಿತ್ತು ಹಲ್ಲು ನಾಲಿಗೆಯುಜ್ಜಿ, ಯಾವ ಪುಣ್ಯಾತ್ಮರು ಉಗಿದ ನೀರೋ ಎಂದು ಅನುಮಾನ ಬಂದು, ಹಾಲನ್ನೆಲ್ಲಾ ಚೆಲ್ಲಿ, ಪುನಃ ಹಾಲು ತರುವಂತೆ ಆ ಹಾಲಿನವನಿಗೆ ಹೇಳಿ, ಗೊಣಗುತ್ತಲೇ ಒಳಕ್ಕೆ ಬಂದೆ. ಮಾಮೂಲಿನಂತೆ ನಮ್ಮವರು ನನ್ನ ಕಾಫೀಗಾಗಿ ಕಾದು ಬೇಸತ್ತಿರ ಬೇಕು. ಎದ್ದು ಪಾಕಶಾಲೆಗೇನೇ ಬಂದುಬಿಟ್ಟರು.

“ ಏನೇ ಸೀತೇ, ಅಂತಸ್ತಿನ ಮಹತ್ತ್ವೋ ಏನೋ ? ಗಂಡನಿಗೆ ಕಾಫೀ ಕೊಡುವುದೇ ಮರೆತೆಯೇನು ? ” ಎಂದರು ಸಿಧಾನದಿಂದಲೇ.

“ ಒಳ್ಳೇ ಅಂತಸ್ತು ! ಒಳ್ಳೇ ಮನೆ ಬಿಡ್ರಿ ! ಹಾಲು ತೆಗೆದುಕೊಳ್ಳು ತ್ತಿರುವಾಗ ಅದರಲ್ಲಿ ಮೇಲಿನಿಂದ ಎಂಜಲು ನೀರು ಬಿತ್ತು. ಅದಕ್ಕೆಂದು ಹಾಲು ಚೆಲ್ಲಿಬಿಟ್ಟೆ. ಮತ್ತೆ ತರಲಿಕ್ಕೆ ಹೇಳಿದ್ದೇನೆ. ಒಂದಿಷ್ಟು ಸಿಧಾನವಾ ದೀತು. ಸಿಟ್ಟೇನು ? ” ಎಂದೆ

ವಾಸ್ತವಕ್ಕೆ ಸಿಟ್ಟು ಬಂದದ್ದು ನನಗಾಗಲಿ ಅವರಿಗಲ್ಲ ಬೆಳಗು ಮುಂಜಾನೆ ಅವರಿಗೆ ಕಾಫೀ ಕೊಡುವಾಗ, ಅವರ ಮೆಚ್ಚುಗೆಯ ಮುಗು ಳ್ನಗೆ ಇಂದು ನನಗಿಲ್ಲದಂತೆ ಮಾಡಿತಲ್ಲವೇ ಈ ಅಂತಸ್ತಿನ ಮನೆ ಎಂದು

ಮಣೆಯ ಮೇಲೆಯೇ ಸಿಟ್ಟು ಬಂದಿತ್ತು.

* * * *

**ಮಾಧ್ಯಾಹ್ನ**

ನಮ್ಮವರು ಕೋರ್ಟಿಗೆ ಹೋದನಂತರ ಆಗಿನ ಕೆಲಸವನ್ನೆಲ್ಲಾ ಮುಗಿಸಿಕೊಂಡು ಸ್ವಲ್ಪ ವಿಶ್ರಮಿಸೋಣವೆಂದು ಹಾಗೇ ಮಂಚದ ಮೇಲೆ ದೇಹವನ್ನೊರಗಿಸಿದೆ ಸ್ವಲ್ಪ ನಿದ್ದೆಯ ಜೊಂಪೂ ಹತ್ತಿರಬೇಕು.

"ಧಿಂ ! ತಕಧಿಂ ! ತೊಂ, ತನ ! ಧಿಂ !.... ತಕ, ತನ"

ಏನಪ್ಪಾ ಇದು! ಯಾರೋ ತಲೆಯ ಮೇಲೆ, ಧಿಮಿಧಿಮಿಯೆಂದೇ ತುಳಿದ ಹಾಗಾಯಿತು ! ಬೆಚ್ಚಿಬಿದ್ದು ಎದ್ದೇಬಿಟ್ಟೆ. ಸುತ್ತೂ ಏನೂ ಕಾಣ ಲಿಲ್ಲ ಕೆಲವು ನಿಮಿಷಗಳ ನಂತರ ಪುನಃ ಗೆಜ್ಜೆಗಳೊಂದಿಗೆ "ತಕ, ಧಿಂ ... " ಶಬ್ದ ಮುಂದುವರೆಯಿತು ಏನಿದ್ದೀತು ಎಂದು ಯೋಚಿಸುತ್ತಿರು ವಾಗಲೇ 'ಸಗಪಧಸ....ರಿಗಪಧಸ....ಧಪಧಪ"ಎಂದು ದಪ್ಪನೆಯ ಕಂಠ ದಿಂದ ಹೊರಟ ಸ್ವರಸಂಗೀತವೂ ಕೇಳಿಬಂತು ! ಆಗರ್ಥವಾಯಿತು, ಮಹಡಿಯ ಮೇಲೆ ಮೀನಾಕ್ಷಮ್ಮನ ಮಗಳು ವನಜಾಕ್ಷಿ ನಾಟ್ಯ ಕಲಿಯು ತ್ತಿರುವಳೆಂದು. ನಾಟ್ಯವೆಂದರೆ ನನಗೂ ತುಂಬಾ ಪ್ರೀತಿಯೇ ಸರಿ. ರಂಗದ ಮೇಲೆ ನಾಟ್ಯವಾಡುತ್ತಿದ್ದರೆ ನೋಡಲು ಯಾರಿಗಿಷ್ಟವಿಲ್ಲ ?.... ನಾಟ್ಯ ಕಲಿಯುವವರು ಮಹಡಿಯ ಮೇಲಿದ್ದು, ಅದರ ಕೆಳಗಡೆಯೇ ನೀವು ಮಲುಗುವ ಕೋಣೆ ಇದ್ದುದೇ ಆದರೆ, ನಿಮಗೂ ಅರ್ಥವಾದೀತು, ಆ ದಿನ ನಾನು ಪಟ್ಟ ಕಷ್ಟ. ಆ ಹುಡುಗಿಯ ಕಾಲು ನನ್ನ ತಲೆಯ ಮೇಲೆ ಇದ್ದ ಹಾಗೇ ಇತ್ತು. ಈ ಪರಿದಾಟಗಳು ಸಾಲದೆಂಬಂತೆ, ಪಕ್ಕದ ಮನೆಯಾತ ಮಹಾ ಕಿವುಡು ಅದರಲ್ಲೂ ಪಾಪ ಮುದುಕ ! ಆತನ ಸೊಸೆ ಅತಿ ಕೋಪಿಷ್ಠೆ. ಮನೆಯಲ್ಲಿ ಏನೇನು ನಡೆಯುವುದೆಲ್ಲಾ ತಾನೂ ತಿಳಿಯಬೇಕೆಂಬಾತೆ ಆ ಮುದುಕನಿಗೆ. ಕಿವುಡು ಮಾತ್ರವಲ್ಲದೆ ಕುತೂ ಹಲವೇಕೆಂಬ ಸಿಟ್ಟು ಸೊಸೆಗೆ ಸರಿ ಆ ಸಿಟ್ಟಿನ ಭರದಲ್ಲಿ, ಆತನಿಗೆ ಯಾವುದೊಂದೂ ಹೇಳಬೇಕಾದರೆ, ಮನೆ ಕಿತ್ತು ಹೋಗುವ ಹಾಗೇ ಕಿರುಚುತ್ತಿದ್ದಳು, ಆ ಮಾರಾಯ್ತಿ ! ಸಾಕಪ್ಪಾ ಎನಿಸಿತ್ತು ! ನಮ್ಮವರು

ಹೇಳಿದ ಹಾಗೆ, ಸಂತೆಯುಲ್ಲಿದ್ದಂತೆಯೇ ಇತ್ತು ಆ ಮನೆಯ ವಾಸ ಇದಿಷ್ಟಕ್ಕೂ ಶಿಖರವೆಂಬಂತೆ, ಹಿಂಭಾಗದಲ್ಲಿ ಕೊಳಾಯಿಗಾಗಿ ಕಸ ಮುಸುರೆಯ ಕೆಲಸದವರ ಜಗಳ !

ನಿಜಕ್ಕೆ ಅಂತಸ್ತಿನ ಮನೆಯ ವಾಸ, ಒಂದು ದಿನಕ್ಕೇ ನನಗೆ ಸಾಕೆನಿಸಿತ್ತು.

ಸಂಜೆ ನಮ್ಮವರು ಕೋರ್ಟಿನಿಂದ ಬಂದ ನಂತರ, ವನಜಾಕ್ಷಿಯ ನಾಟ್ಯದಿಂದ ನನಗುಂಟಾದ 'ಸುಖ'ವನ್ನು ತಿಳಿಸುತ್ತಾ "ನೋಡ್ರಿ, ಆ ಎರಡನೆ ಅಂತಸ್ತಿನಲ್ಲಿರುವವರು ಗ್ರಾಮೊಫೋನ್ ಷಾಪ್ ಇಟ್ಟಿದ್ದಾರಂತೆ. ಅಂಗಡಿಯಿಂದ ಬರುವುದೇ ರಾತ್ರಿ ಹತ್ತು ಗಂಟೆಯಾಗುತ್ತಂತೆ. ಹೊಸ ಮಿಷನ್‌ಗಳನ್ನು ಪರೀಕ್ಷಿಸಲೋಸುಗ ರಾತ್ರಿಯೆಲ್ಲಾ, ಆ ಅವಾಂತರ....?"

"......... ......"

"ಏನ್ರೀ ! ಎಲ್ಲಕ್ಕೂ ಒಂದು ಮುಗುಳ್ನಗೆಯೇ ಉತ್ತರವೇ ? ಬೆಳಿಗ್ಗೆ ಹಾಲಿನಲ್ಲಿ ಬಿದ್ದದ್ದು ಆ ವನಜಾಕ್ಷಿಯ ಅಜ್ಜ ಹಲ್ಲುಜ್ಜಿದ ಎಂಜಲು ನೀರು .. ನಾನು ನಿಧಾನವಾಗೇ ಆ ಮುದುಕಮ್ಮನಿಗೆ, 'ಕೆಳಗಿರುವವರ ಯೋಚನೆ ಮಾಡಬೇಡವೇನಮ್ಮಾ ?' ಎಂದುದಕ್ಕೆ, ಜಗಳಕ್ಕೇ ಬಂದು ಬಿಟ್ಟಳು ಪುಣ್ಯಾತ್‌ಗಿತ್ತಿ ! ನೀವೇನೊ ನಗುತ್ತೀರಿ." ಎಂದೆ. ನನಗಂತೂ ಸಹನೆ ಮೀರಿತ್ತು.

"ಸಂತೆಯುಲಿ ಬಂದು ಮನೆ ಮಾಡಿ ಶಬ್ದಕ್ಕಂಜಿದಡೆಂತು? ಬಂದು ಸೇರಿದ್ದಾಯಿತು. ಅಭ್ಯಾಸ ಆದರೆ ಸರಿಹೋಗುತ್ತೆ"

"ರೀ, ಎಂದಾದರೂ ನೂರಾರು ಬೆಕ್ಕುಗಳ ಕಿರಿಚಾಟದ ಮಧ್ಯದಲ್ಲಿದ್ದ ಅನುಭವವುಂಟೇನು ನಿಮಗೆ?" ಎಂದೆ ಸಿಟ್ಟು ತುಂಬಿ ಬಂದು.

ಅವರು ಇನ್ನೂ ನಗುತ್ತಲೇ "ಇಲ್ಲ. ಏಕೆ ಸೀತೇ, ಈ ಮನೆಯಲ್ಲಿ, ನೂರಾರು ಬೆಕ್ಕುಗಳು ಬೇರೇ ಇವೆಯೇ ?" ಎಂದು ಕೇಳಿದರು.

"ಚೆನ್ನಾಗಿದೆ, ಅದನ್ನಿಷ್ಟು ನೋಡಬೇಕಿತ್ತೇನೋ! ನನ್ನ ಪುಣ್ಯಕ್ಕೆ ಅದೊಂದಿಲ್ಲ ! ಅದಲ್ರೀ, ನಾನು ಹೇಳುವುದು, ಈ ಮನೆಯಲ್ಲಿರುವುದು ನನಗೆ ಅಷ್ಟೊಂದು ಅಹಿತವಾಗಿದೆಯೆಂದು."

ನನಗಂತೂ ಕಣ್ಣಲ್ಲಿ ನೀರು ತುಂಬಿತ್ತು.

"ಸೀತೇ...."

" ಏನು ? "

" ನಿನಗೆ ಬೇರೇ ಮನೆಗೆ ಹೋಗಬೇಕೆಂದಿದೆಯೇನು ? "

" ಹೂಂ. ಎಲ್ಲಾದರೂ ಸಣ್ಣ ಮನೆಯಾದರೂ ಪರವಾಗಿಲ್ಲ. ಶಾಂತವಾತಾವರಣವಿದ್ದರೆ ಸಾಕೆನ್ನಿಸಿದೆ. "

" ನೋಡು, ಮಲ್ಲೇಶ್ವರದಲ್ಲಿ ಒಂದು ಮನೆಯಿದೆ. ಬಾ, ನೋಡಿ ಕೊಂಡು ಬರೋಣ. ನೀನೊಪ್ಪಿದರೆ ಹೋಗೋಣ. "

* * * *

ಮನೆ ನೋಡಲು ಬಹಳ ಆತುರದಿಂದಲೇ ಹೊರಟೆ.

" ಅಬ್ಬ ! ಎಷ್ಟು ಚೆನ್ನಾಗಿದೇರೀ ಈ ಮನೆ ! ಸಾಕಷ್ಟು ಬೆಳಕು, ಗಾಳಿ, ಮುಂದೆ ಅಂಗಳ. ಬೆಳದಿಂಗಳಲ್ಲಿ ಬಹಳ ಚೆನ್ನಾಗಿರುತ್ತೆ! ಯಾರದು ಈ ಮನೆ ? " ಎಂದೆ.

" ಯಾರದೇ ಇರಲಿ, ಮನೆ ಹೇಗಿದೆ.... ನೋಡು ಸೀತೆ ? ಬೇಕಾ ದಷ್ಟು ಹೂ-ಗಿಡಗಳು. ಆ ಕೆಂಪು ಗುಲಾಬಿ ಎಷ್ಟು ಚೆನ್ನಾಗಿದೆ ನೋಡು! ತರಲೇ ? "

" ಹೌದ್ರಿ, ಬಹಳ ರಮ್ಯ ಇದೆ, ಇಲ್ಲಿಗೇ ಬಂದುಬಿಡೋಣ. ಇದು ಖಾಲಿಯಾಗಿ ಎಷ್ಟು ದಿನವಾಯ್ತು ? ಮುಂಚೆಯೇ ತಿಳಿದಿದ್ದರೆ ಇಲ್ಲಿಗೇ ಬರಬಹುದಾಗಿತ್ತು. ಅಲ್ಲವೇನ್ರೀ ? "

" ಹೌದು........ ಹದಿನೈದು ದಿನದಿಂದ ಖಾಲಿಯಾಗೇ ಇದೆ." ಎಂದರು ಕಳ್ಳನಗೆ ನಗುತ್ತಾ ನಿಧಾನವಾಗಿ.

" ಅಲ್ಲಾ, ಇಷ್ಟು ಒಳ್ಳೆ ಮನೆ ಖಾಲಿಯಾಗಿದೇಂತ ತಿಳಿದಿದ್ದೂ ಆ ಅಂತಸ್ತಿನ ಮನೆಗೆ ಹೋಗೋದಕ್ಕೆ ಏಕೆ ಒಪ್ಪಿದಿರಿ ? ಹೀಗೊಂದು ಮನೆಯಿದೆಯೆಂಬ ಸಮಾಚಾರವೂ ಸಹ ನನಗೆ ನೀವು ತಿಳಿಸಲಿಲ್ಲ! ಅದೇಕೆ ? "

" ನೋಡು ಸೀತೆ, ನೀನೂ ಬಹಳ ದಿನಗಳಿಂದ ಅಂತಸ್ತಿನ ಮನೆ ಗಳ ಬಗ್ಗೆ ಹೇಳುತ್ತಿದ್ದೆ. ಅಂತಸ್ತುಗಳ ಅಂತರಂಗದ ಅನುಭವ ನನ್ನ ಸೀತೆಗೆ ತುಸು ಇರಲಿಯೆಂದು ಸುಮ್ಮನಿದ್ದೆ ಅಷ್ಟೆ. "

ನನಗೆ ಈ ಸಲ ನಿಜಕ್ಕೆ ನಮ್ಮವರ ಮೇಲೆ ಸಿಟ್ಟುಬಂತು. " ನೀವು ಬಲೆ ಗಟ್ಟಿಗರು ಕಂಡ್ರೀ ! ಒಳ್ಳೆಯವರ ಹಾಗೇ ಸೋಗುಹಾಕಿ ನನ್ನ

ಅವಿವೇಕಕ್ಕೆ ಕನ್ನಡಿ ಹಿಡಿದಿರಲ್ಲವೆ ? ”

“ ಹಾಗಲ್ಲ ಸೀತೆ ! ಬೇವು ತಿಂದರೇನೇ, ಬೆಲ್ಲದ ಸವಿ ಹೆಚ್ಚುವುದು ನೋಡು ! ಸೀತೇ, ಸಿಟ್ಟು ಬಂತೇನೇ ? ಎಲ್ಲಿ ? ಇಲ್ಲಿ ನೋಡು....” ಎಂದು ನಮ್ಮವರು ನನ್ನ ಹತ್ತಿರಕ್ಕೆ ಬಂದರು.

“ ಸುಮ್ಮನಿರಿ. ಬಾಗಿಲುಗಳೆಲ್ಲ ತೆಗೆದೇ ಇವೆ. ಯಾರಾದರೂ ಬಂದಾರು....” ಎಂದೆ ನಾನು ಕತ್ತು ಕೊಂಕಿಸುತ್ತಲೇ.

“ ಲೇ ಸೀತೇ, ನೋಡು ಸಿಟ್ಟು ಮಾಡಿಕೊಳ್ಳಬೇಡ.... ”

“ .... ಇಲ್ಲ ಬಿಡಿ. ಸಿಟ್ಟೇಕೆ ? ದೇವರ ದಯೆಯಿಂದ ಈ ಮನೆ ಸಿಕ್ಕಿತಲ್ಲಾ.... ಏನ್ರೀ ? ಎಂದು ಬರೋಣ ? ” ಎಂದೆ ಉತ್ಸಾಹದಿಂದ.

“ ಬೇಕಾದಾಗ. ಮನೆ ನಿನ್ನದೇ ಇದೆ. ”

“ ಅಂದರೆ ! ”

“ ಕೊಂಡೆ. ”

“ ಹಣ ? ”

“ ....... .... ”

“ ಸಾಲವೇನು ? ”

“ ........... ”

“ ಆ ಕಡೆ ಏನು ನೋಡುತ್ತಿದ್ದೀರಿ ? ಮಾತನೇಕೆ ಆಡೋದಿಲ್ಲ?”

“ ಭಯ... ”

“ ಅಂತಹದೇನು, ಹೇಳಿ. ”

“ ಮದುವೆಯಲ್ಲಿ ಬಂದ ನಿನ್ನ ಆ ತೋಟ ಮಾರಿಬಿಟ್ಟು ಆ ಹಣ ದಿಂದ ಇದನ್ನು ಕೊಂಡೆ. ತಪ್ಪಾಯಿತೇ ? ”

“ ........... ”

“ ಆ ಕಡೆ ಏನು ನೋಡುತ್ತಿದ್ದೀ ? ತಿರುಗಿ ಮಾತನಾಡೇ.”

“ ... ........ ”

ಬೆನ್ನು ತಟ್ಟಿದರು. “ ಮಾತನಾಡೇ ” ಎಂದರು ಮತ್ತೆ.

“ ತೌರು ಹೋದ ದುಃಖವಿದ್ದರೂ ನಲ್ಲ ದೊರೆತನೆಂಬ ಸುಖವೂ ಇದೆ ಆಗಲಿ ನೀವು ಹೇಳಿದಂದು ಬರೋಣ ”

“ ಬರುವ ಹುಣ್ಣಿಮೆಯ ವೇಳೆಗೆ, ಇಲ್ಲಿಗೇ ಬರೋಣ. ಬೆಳದಿಂಗಳ

ಊಟ ಇಲ್ಲೇ ಮಾಡೋಣ. ಹೇಳೇ ಸೀತೆ, ಸಿಟ್ಟಿಲ್ಲ ತಾನೆ ?" ಎಂದರು, ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಾ.

" ಇಲ್ಲ ಇಲ್ಲ, ಪತಿದೇವ. " ಎಂದೆ.

ತುಂಬಿದ ತೃಪ್ತಿಯಿಂದ ನಮ್ಮ ಹೊಸ ಮನೆಯಲ್ಲಿಯ ಬೆಳದಿಂಗಳ ಊಟದ ಬಗ್ಗೆ ಯೋಚಿಸುತ್ತಲೇ ಅಂತಸ್ತಿನ ಮನೆಗೆ ನಮ್ಮವರೊಡನೆ ಹಿಂತಿರುಗಿದೆ.

## ಬಾಳ್ಗತ್ತಲು ‡ ‡ ‡ ‡

ಅವನೂ ಒಂದು ಕಾಲದಲ್ಲಿ ಸುಂದರನಾಗಿದ್ದಿರಬೇಕು. ಮೂವತ್ತೈದು ವರ್ಷಗಳ ಪ್ರಾಯವಿದ್ದೀತು. ನಿಲುವು ಎತ್ತರವಾದ ಅವನ ಶರೀರ, ದುಃಖದ ಭಾರದಿಂದಲೋ ಏನೋ, ಸ್ವಲ್ಪ ಬಾಗಿತ್ತು. ಇಂದು ಸಡಿಲವಾದ ಅವನ ಮೈಕಟ್ಟು, ಒಮ್ಮೆ ಕಟ್ಟುಮುಟ್ಟಾಗಿ ಇದ್ದು ಸುಂದರವಾಗಿದ್ದಿರಬೇಕು. ಶೋಕಪೂರಿತವಾದ ಅವನ ಕಣ್ಣುಗಳು ಒಮ್ಮೆ ಚಂಚಲವಾಗಿ ಹೊಳೆಯುತ್ತಿದ್ದಿರಬೇಕು. ಬಿಗಿಯಾದ ಅವನ ಆ ತುಟಿಗಳ ಮೇಲೆ, ಒಮ್ಮೆ ನಲ್ಮೆಯ ನಗೆಯ ಲಹರಿಗಳು ತೇಲಿ ಹೋಗಿದ್ದಿತೇನೋ! ಆ ಸೌಂದರ್ಯವೆಲ್ಲ ಯಾವ ಹೆಣ್ಣಿನ ಬೆಳದಿಂಗಳಾಗಿತ್ತೋ! ಇಂದು ಆ ಮುಖದ ಮೇಲೆ ಜಿಗುಪ್ಸೆಯ ಮುದ್ರೆಯೊಂದು ಮೂಡಿತ್ತು. ಅವನ ಮುಖಭಾವವು ದೃಢ ಸೂಚನೆಯೊಂದನ್ನು ತೋರುತ್ತಿತ್ತು. ಅಂತೇ ಅವನು ನನ್ನನ್ನಾಕರ್ಷಿಸಿದನು. ಆ ಜಿಗುಪ್ಸೆ, ದೃಢ ಸೂಚನೆ, ಒಡೆದ ಹೃದಯದ ಒಡನಾಡಿಗಳೆಂದೆನಿಸಿತು ನನಗೆ

ನನ್ನ ಜೀವನದಲ್ಲಿ ಮುಖ ನೋಡಿ ಮನಸ್ಸು ತಿಳಿಯುವ ಸಾಕಷ್ಟು ಅನುಭವ ನನ್ನದಾಗಿತ್ತು. ಇವನು ನಾ ಕಂಡ ಯುವಕರಂತೆ ಅಲ್ಲವೆಂದು, ಮನಶ್ಶಾಸ್ತ್ರವನ್ನು ಓದದೆ ಇದ್ದರೂ, ಹೇಳಬಲ್ಲೆನಾಗಿದ್ದೆ. ಅಂತೇ, ನನಗೆ ಅವನೊಡನೆ ಪರಿಚಯ ಮಾಡಿಕೊಳ್ಳಬೇಕೆನಿಸಿತು. ಅವನ ಹೃದಯದ ಆ ದಾರುಣ ದುಃಖವನ್ನು ಹೊರಹಾಕಬೇಕೆನ್ನಿಸಿತು. ಒಮ್ಮೆ ಸುಂದರವಾಗಿದ್ದ ಅವನ ಮುಖವನ್ನು ಮತ್ತೆ ತೇಜಃಪುಂಜವಾಗಿ ಮಾಡಬೇಕೆನ್ನಿಸಿತು. ನಿರಾಶಾಪೂರಿತವಾದ ಆ ಕಂಗಳಲ್ಲಿ ಆಶೆಯನ್ನು ತುಂಬಬೇಕೆನ್ನಿಸಿತು. ಏನಾಶೆ ? ನಾನಾರು ? ಅವನಾರು ? ನನ್ನನ್ನು ತಿಳಿದನಾದರೆ, ನಾನು ಕರೆದರೆ, ಅವನು ಬರುವನೆ ? ಏನೋ ?........

" ಆಯ್ಕೆ, ವಿಹಿತ, ಪ್ರಿಯ " ವೆಂಬ ಪದಗಳು, ನನ್ನ ಜೀವನಕ್ಕೇ ಅಪರಿಚಿತವಾಗಿದ್ದವು.... ಲಂಗರಿಲ್ಲದ ದೋಣಿಯಂತೆ, ಗಾಳಿ ಬೀಸಿದತ್ತ ಹೊಯ್ದಾಡುತ್ತಿತ್ತು ನನ್ನ ಜೀವನದೋಣಿ. ಬಯಸಿದ್ದೆಲ್ಲಾ ದೂರವಾಗಿ, ಬೇಡವಾದ್ದೆಲ್ಲಾ ಹತ್ತಿರ ಬಂದು ಅಪ್ಪಿದಾಗಲೂ ಹಸನ್ಮುಖಿಯಾಗಿರುವೇ

ಇರಬೇಕಾದದ್ದು, ವಿಧಿಯೊಡ್ಡಿದ ನನ್ನ ನಿತ್ಯಕರ್ಮವಾಗಿತ್ತು ... ಹಾಗೆಂದೇ ಅವನು ನನ್ನನ್ನಾಕರ್ಷಿಸಿದಾಗ, ಕರೆದರೆ ಬರುವನೇ ಎಂಬ ಸಂದೇಹವು ಹೆಚ್ಚಾಯಿತು ಅವನನ್ನು ಕರೆತಂದು, ಅವನೊಡನೆ ಮಾತನಾಡಬೇಕೆಂಬಾಶೆ, ಸಹಜಸಿದ್ಧವಾದ ಲಜ್ಜೆಯನ್ನೂ ನನ್ನಿಂದ ದೂರ ಮಾಡಿತು. ನನ್ನ ಕಾರ್ಯದಲ್ಲಿ ನಾನು ನಿರಾಶಳಾಗುವೆನೇನೋ ಎಂಬ ಅನುಮಾನವು ಸಹ ಹುಟ್ಟಲು ಅವಕಾಶ ಕೊಡಲಿಲ್ಲ. ಅಂತೇ ನನ್ನ ಲಜ್ಜೆ ಸಂಕೋಚವನ್ನೆಲ್ಲಾ ಹಿಮ್ಮೆಟ್ಟಿ ಹೊರಗೆ ನಡೆದೆ. ಹೊರಗೆ ಬರುವ ಮುನ್ನ, ಅಲ್ಲೇ ಎದುರಾಗಿದ್ದ ಕನ್ನಡಿಯಲ್ಲಿ ನನ್ನ ಪ್ರತಿಬಿಂಬವನ್ನು ನೋಡಿಕೊಂಡೆ. ಮೂರು ದಿನದ ಉಪವಾಸವ್ರತದಿಂದ ನನ್ನ ಮುಖ ಕಳೆಗುಂದಿತ್ತು. ಕಣ್ಣುಗಳು ಗುಳಿಬಿದ್ದಿದ್ದವು. ಆದರೆ ಇಂದು ನನ್ನ ಸೌಂದರ್ಯದಿಂದ ಅವನನ್ನು ಆಕರ್ಷಿಸಲು ಬಯಸಲಿಲ್ಲ. ನನ್ನ ಸ್ತ್ರೀತ್ವದಿಂದಲೆ ಅವನನ್ನು ನನ್ನೆಡೆಗೆ ಎಳೆಯಬೇಕೆಂದೆನಿಸಿರಲಿಲ್ಲ ಅವನ ಹೃದಯದ ದಾರುಣ ದುಃಖದ ಕೂಗೊಂದೇ ನನಗೆ ಕೇಳಿಬರುತ್ತಿತ್ತು. ಹೆಣ್ಣಲ್ಲಿಯ ತಾಯ್ತನದ ಪ್ರೀತಿ, ಕರುಣೆ, ನನ್ನನ್ನಾವರಿಸಿತ್ತು. ನನ್ನ ಹೃದಯ ಅವನ ದುಃಖವನ್ನು ಹೊರಚಿಮ್ಮಲು ಆತುರಪಟ್ಟಿತು, ಅವನನ್ನು ಸಮಾಧಾನಪಡಿಸಲು ಚಡಪಡಿಸಿತು.

ಅವನು ನನ್ನ ಮನೆಯ ಮುಂದೆ ಏನನ್ನೋ ಹುಡುಕುತ್ತಿದ್ದನು. ಅಂತೇ ಧೈರ್ಯ ಮಾಡಿ ಹೋಗಿ, ಅವನ ಮುಂದೆ ನಿಂತೆ. "ನಮಸ್ತೇ" ಎಂದೆ.

ಅವನು ಚಕಿತನಾಗಿ ನನ್ನೆಡೆಗೆ ದುರುಗುಟ್ಟಿ ನೋಡಿದನು........ ಹಾಗೇ ಎರಡು ಕೈಗಳನ್ನೂ ಜೋಡಿಸಿ "ನಮಸ್ತೇ" ಎಂದು ಮತ್ತೆ ಹುಡುಕಲನುವಾದನು.

" ಏನು ಕಳೆದುಕೊಂಡಿದ್ದೀರಿ ? ಕಳೆದುಕೊಂಡ ವಸ್ತುವು ಸಿಕ್ಕೀತೇ ? " ಎಂದೆ. ಅವನು ತಲೆಯೆತ್ತಿ " ಇಲ್ಲ. ಕಳೆದುಕೊಂಡ ವಸ್ತುವಿಗಾಗಿ ನಾನೆಂದೂ ಹುಡುಕುವುದಿಲ್ಲ. ಏನೋ ಥಳಕ್ಕೆಂದಿತು. ಏನಿದ್ದೀತು ಎಂಬ ಕುತೂಹಲವಷ್ಟೆ ! ನೀವು ಯಾರು ? ನಿಮಗೆ ನನ್ನ ಪರಿಚಯ ಉಂಟೆ ? " ಎಂದನು

" ಇಲ್ಲ. ಪರಿಚಯವಿಲ್ಲವಾಗಲಿ, ಪರಿಚಯ ಮಾಡಿಕೊಳ್ಳಬೇಕೆಂ

ತಲೇ ಬಂದೆ. ಅದೋ ನೋಡಿ, ಅದೇ ನನ್ನ ಮನೆ. ಬನ್ನಿ, ಅಲ್ಲಿ ಹೋಗಿ ಕುಳಿತು ಮಾತಾಡುವ. ''

ಅವನು ಹಾಗೇ ಅವಾಕ್ಕಾಗಿ ನಿಂತ.

'' ಬನ್ನಿ .. .... ''

''ಬರಬೇಕೇತಕ್ಕೆ! ನಿಮ್ಮಲ್ಲಿ ಮಾತಾಡಲಾದರೂ, ನಮ್ಮೀರ್ವರಿಗೂ ಇರುವ ಬಾಂಧವ್ಯವಾದರೂ ಏನು? ಪರಿಚಿತರೂ ಆಪ್ತರೂ ಅಲ್ಲದ ನಿಮ್ಮಲ್ಲಿ ಮಾತನಾಡಲಿರುವ ವಿಷಯವಾದರೂ ಏನುಂಟು?" ಹಣೆಯನ್ನು ಬಿಗಿದುಕೊಂಡೇ ಉತ್ತರ ಕೊಟ್ಟ.

ನಾನು ನಗುತ್ತಲೇ '' ನೊಂದ, ಬೆಂದ ಹೃದಯಗಳಿಗೆ, ಆಪ್ತರೂ ಪರಿಚಿತರೂ ಎಂಬುದೊಂದುಂಟೇ! ಬೆಂದ ಹೃದಯದ ಕರೆಗೆ ಓ ಕೊಡುವುದಾದರೆ, ಅದು ನೊಂದ ಹೃದಯದಿಂದಲೇ ಬರಬೇಕು........ ಬನ್ನಿ . ನಿಮ್ಮನ್ನು ನೋಡಿದೊಡನೆ ನಿಮ್ಮ ಪರಿಚಯ ಮಾಡಿಕೊಳ್ಳ ಬೇಕೆನಿಸಿತು.... ಅಂತೇ ಈ ಆಹ್ವಾನ!........ ಬನ್ನಿ, ಏಕೆ? ಬರಲಿಷ್ಟ ವಿಲ್ಲವೆ? '' ಎಂದೆ.

ಒಂದೆರಡು ಕ್ಷಣ, ನಿರುತ್ತರನಾಗಿ ನನ್ನೆಡೆಗೇ ನೋಡಿದನು. ವ್ಯಕ್ತಿತ್ವ ವನ್ನು ಅಳತೆ ಮಾಡುವ ಹಾಗೆ ಮತ್ತೆ, ಮರುಮಾತಾಡದೆಯೇ ನನ್ನ ಹಿಂದೆಯೇ ಬಂದನು.

ಬಾಗಿಲು ತೆಗೆದು ಒಳಕ್ಕೆ ಹೊರಟೆವು ನಾನು ಮುಂದೆ ನಡೆ ಯುತ್ತಾ, ಅಲ್ಲೇ ಇದ್ದ ಮಂಚದ ಮೇಲೆ ಕುಳಿತೆ ಅಲ್ಲೇ ನನ್ನ ಸಂಸಾರ ವೆಲ್ಲಾ ಹುದುಗಿತ್ತು.

'' ಬನ್ನಿ.... ಕುಳಿತುಕೊಳ್ಳಿ '' ಎಂದು ನನ್ನ ಬದಿಯಲ್ಲೇ ಜಾಗ ಮಾಡಿದೆ. ಅವನು ಕೋಣೆಯ ಸುತ್ತಲೂ ನೋಡುತ್ತ ಒಂದು ಮುಗುಳು ನಗೆ ನಕ್ಕ. ಬಂದು ನನ್ನ ಪಕ್ಕದಲ್ಲೇ ಕುಳಿತನು.

'' ಈಗರ್ಥವಾಯಿತೆ ನಾನು ಯಾರೆಂದು? ನನ್ನ ಕಸುಬೇನೆಂದು? ನನ್ನ ಹೊಟ್ಟೆ ಹಂಬಲಿಗಾಗಿ ನನ್ನ ದೇಹವನ್ನು ಮಾರಿಕೊಳ್ಳುತ್ತಿದ್ದೇನೆ. ಈಗ ಮೂರು ದಿನದಿಂದ ಸಂಪಾದನೆಯಿಲ್ಲದೆ ಉಪವಾಸವಿರಬೇಕಾ ಯಿತು. ನನ್ನನ್ನು ನೋಡಿ ಬಹುಶಃ ನಿಮಗೆ ಬೇಸರವೆನಿಸಬಹುದು.... ಆದರೆ ನಿಮ್ಮನ್ನು ಕರೆತಂದ ಉದ್ದೇಶ, ನನ್ನ ಉದ್ಯೋಗರೀತ್ಯಾ ಅಲ್ಲ....

ಸ್ವಲ್ಪ ಕೂಡಿ ಕಾಫಿ ಮಾಡಿ ಕೊಡುತ್ತೇನೆ " ಎಂದು ಕಾಫಿ ಮಾಡಲು ಎದ್ದೆ.

ಅವನು ಏನೂ ಮಾತನಾಡಲಿಲ್ಲ. ಮುಖದಲ್ಲಿ ಯಾವ ಭಾವವೂ ಕಾಣಲಿಲ್ಲ ಹಾಗೇ ಶಿಲಾವಿಗ್ರಹದಂತೆ ಕುಳಿತಿದ್ದ. ಕಾಫಿ ತಂದು ಕೊಟ್ಟೆ. ಕುಡಿದನು. ಎಲ್ಲವನ್ನೂ ಬರೀ ಯಾಂತ್ರಿಕವಾಗಿ ಮಾಡುತ್ತಿದ್ದನು. ನನ್ನ ಅನುಭವದಲ್ಲಿ ಈ ನಮೂನೆಯ ಮನುಷ್ಯ ಇವನೊಬ್ಬನನ್ನೇ ನಾನು ಕಂಡಿದ್ದು.

ನನ್ನ ಚೆಲುವೂ, ನನ್ನ ಯೌವನವೂ, ನನ್ನ ಸ್ವೇಚ್ಛೆಯೂ, ಯಾವುದೊಂದೂ ಅವನನ್ನು ಆಕರ್ಷಿಸಲಿಲ್ಲವಾದೀತು ನಾನು ಹೆಣ್ಣು, ಅವನು ಬಯಸಿದರೆ ಅವನ ಭೋಗವಸ್ತುವು ನಾನು, ಎಂದು ಸಹ ಅವನಿಗೆ ತೋರಲಿಲ್ಲ. ಅಂತೇ ಅವನಲ್ಲಿ ನನಗೊಂದು ವಿಧವಾದ ಭಕ್ತಿ ಗೌರವಗಳು ಮೂಡಿತ್ತು ಅವನ ವಿಚಾರವಾಗಿ ತಿಳಿದುಕೊಳ್ಳಬೇಕೆಂಬ ಕುತೂಹಲ, ಆತುರ ಹೆಚ್ಚಾಯಿತು ಬಹುಶಃ ಅವನೂ ನನ್ನ ಹೃದಯದಲ್ಲಡಗಿರುವ ನೋವನ್ನು ಕಂಡನೇನೋ ! ನನ್ನ ಜೀವನದ ಇರಿತವನ್ನಿಷ್ಟು ಅರಿತನೇನೋ! ಅಂತೇ ಸ್ತಬ್ಧನಾಗಿ ಕುಳಿತನು.

ಕಾಫಿ ಕುಡಿದ ನಂತರ, ಬಹಳ ಹೊತ್ತು ಇಬ್ಬರೂ ಮೌನವಾಗೇ ಇದ್ದೆವು. ನಾನು ಮಾತ್ರ ಇನ್ನೂ ಪಕ್ಕಕ್ಕೆ ಜರುಗಿ, ಅವನ ಭುಜದ ಮೇಲೆ ಕೈ ಹಾಕಿದೆ ಅವನು ನನ್ನನ್ನು ತಡೆಯಲಿಲ್ಲ ಅವನ ಮುಂಗುರುಳನ್ನು ನೇವರಿಸಿದೆ. ಇನ್ನೂ ಹಾಗೇ ಕುಳಿತನು, ನಿರ್ವಿಕಾರನಾಗಿ. ಅವನ ಕೈ ತೆಗೆದುಕೊಂಡು ನನ್ನ ಕೈಲಿಟ್ಟುಕೊಂಡೆ. ಶಿಲಾಪ್ರತಿಮೆಯಂತೆ ದೃಷ್ಟಿಯನ್ನು ಕೂಡ ಚಲಿಸದೆ ಕೂತ, ದಂಗುಬಡಿದವನಂತೆ

" ನಿಮ್ಮ ಹೆಸರೇನು ? " ಎಂದು ನಾನೇ ಪ್ರಾರಂಭಿಸಿದೆ.

" ಮೂರ್ತಿ. "

" ನನ್ನ ಹೆಸರು ಶ್ಯಾಮಾ. "

" ... ... .... "

" ಮೂರ್ತಿ, ಮಾತಾಡಿ ! ಮೌನದಿಂದಲೇ ನಿಮ್ಮ ಬೇಸರನ್ನು ತೋರದಿದ್ದರೆ ಹೇಳಬಾರದೇಕೆ ? ನಾನು ನಿಮ್ಮನ್ನು ನನ್ನ ಕಸುಬಿನ ರೀತಿ ಇಂದು ಹಣಕ್ಕಾಗಿ ಕರೆತರಲಿಲ್ಲ. ನಿಮ್ಮ ಕಣ್ಣುಗಳು ಶೋಕಮಯ

ವಾಗಿವೆ. ಮುಖಮುದ್ರೆ ಜಿಗುಪ್ಸೆಯಿಂದ ಕೂಡಿದೆ ಎಂತೋ, ಏನೋ, ನಿಮ್ಮಲ್ಲಿಯ ನೋವು ನನ್ನನ್ನಾವರಿಸಿತು. ಅಂತೇ ನಿಮ್ಮನ್ನು ಕರೆತಂದೆ.... ನನ್ನ ವೃತ್ತಿಯನ್ನು ನೋಡಿ ನಿಮಗೆ ಬೇಸರ ತಿರಸ್ಕಾರಗಳಿದ್ದೀತು. ಸಹಜವೇ ಸರಿ ಮೂರ್ತಿ ಹೇಳಿ ."

"ಏನು ಹೇಳಲಿ ಶ್ಯಾಮಾ....ಯಾರ ತಪ್ಪಿಗೆ ಯಾರು ಹೊಣೆ? ... ಜೀವನದ ಸಮಸ್ಯೆಯನ್ನು ಬಗೆಹರಿಸಲಾರದೆ, ಜೀವನದ ಬಗ್ಗೆ, ಪ್ರಪಂಚದ ಬಗ್ಗೆಯೇ ಜಿಗುಪ್ಸೆ ಹೊಂದಿ, ಒಂದಾನೊಂದು ಕಾಲದಲ್ಲಿ ಮೃದುವಾಗಿದ್ದ ಹೃದಯವನ್ನು ಪಾಷಾಣ ಮಾಡಿಕೊಂಡಿರುವ ನನ್ನನ್ನು ಏನು ಹೇಳಬೇಕೆನ್ನುವೆ ?"

"ಏನಾದರೂ ಹೇಳಿ. ನನ್ನ ಬಗ್ಗೆ ನಿಮ್ಮ ತಿರಸ್ಕಾರವನ್ನುಮನಸಾರೆ ಹೇಳಿ ! ಎಲ್ಲರಂತಲ್ಲದೆ ಪ್ರತ್ಯೇಕತೆಯೊಂದನ್ನು ನಿಮ್ಮಲ್ಲಿ ಕಂಡದ್ದರಿಂದಲೇ ನಿಮ್ಮನ್ನು ಕರೆತಂದೆ ! ಕಾಮುಕರ ಕಣ್ಣಿಗೆ ಕಾಣುವ ಕಾಮಿನಿಯಲ್ಲದೆ ಮಾನವಿಯೆಂದು ನೀವು ತಿಳಿಯಬಲ್ಲಿರೆಂದು ಕರೆತಂದೆ ! ವಿಷಯಲಂಪಟರಾಗಿ, ಮೈಮರೆತು ಹೊಗಳಿ, ಮತ್ತಷ್ಟು ಪಾಪಾಂಧಕಾರ ಕೂಪದಲ್ಲಿ ತಳ್ಳಿ, ಹೋಗುತ್ತಾ ಕಾಸುಗಳೆರಡನ್ನೆರಚಿ ಹೋಗುವ ವೇಶ್ಯಾಲೋಲರು ನೀವಲ್ಲವೆಂದೇ ಹೃದಯಾಂತರಾಳವನ್ನು ಹುಡುಕಬಲ್ಲ ದೂರದೃಷ್ಟಿಯೊಂದನ್ನು ನಿಮ್ಮ ಕಣ್ಣಲ್ಲಿ ಕಂಡೆನೆಂದೇ, ಇಂದು ನಿಮ್ಮನ್ನು ಕರೆದೆ . .."

"ಶ್ಯಾಮಾ....ಏನು ಹೇಳುತ್ತಿರುವೆ ?"

"ಹೌದು ಮೂರ್ತಿ ! ಹೇಸಿಗೆಯ ಜೀವನ ನನ್ನದು.... ಹೃದಯದಲ್ಲಿಯ ನಿಜವನ್ನೂ ಸೌಂದರ್ಯವನ್ನೂ ಮಾನವತ್ವವನ್ನೆಲ್ಲಾ, ಎಲ್ಲಾ ಮೂಲೆಯಲ್ಲಿ ತಳ್ಳಿ, ಹೊಟ್ಟೆಯ ಹಂಬಲಕ್ಕಾಗಿ, ಒಂದು ದಿನ ಮಾತಕ್ಕೆಂದು ತಪ್ಪಡಿಯಿಟ್ಟೆ ! ಒಂದು ದಿನದ ಪಾಪವು, ಯಾವಜ್ಜೀವವೂ ಅನಂತವಾಗಿ ನನ್ನಾವರಿಸಿತು........ ಹೌದು ... ನಿಮಗೆ ಬೇಸರವಾಗತ್ತಿದೆ ... ಇಲ್ಲಿ ಕುಳಿತಿರುವುದೇ ಹೇಸಿಗೆಯೆನಿಸುತ್ತಿದೆ ....... ನಾ ಬಲ್ಲೆ.... ಹೇಳಿ....... ಮೂರ್ತಿ......."

ಎಂದಿನಿಂದಲೊ ತಡೆಗಟ್ಟಿದ್ದ ನನ್ನ ದುಃಖವೆಲ್ಲಾ ಇಂದು ಮೂರ್ತಿಯೆದಿರಲ್ಲಿ, ಸ್ವೇಚ್ಛೆಯಾಗಿ, ಎಡೆತಡೆಯಿಲ್ಲದೆ ಹರಿಯತೊಡಗಿತು....

ಮೂರ್ತಿಯ ಕಣ್ಣೊ ಯಾಗಿದ್ದವು.

" ಶ್ಯಾಮಾ, ಮಾನವನ ಜೀವಿತವನ್ನು ಚರ್ಚಿಸಲು, ನ್ಯಾಯಾ ನ್ಯಾಯಗಳನ್ನು ಹೇಳಲು, ಸರಿ ತಪ್ಪುಗಳನ್ನು ತೋರಿಸಲು ನಾನಾರು ? ನೋಡು.... ನಾನೂ, ನಿನ್ನಂತೆ ಸಮಾಜದಿಂದ ಕಟ್ಟಳೆ ನಿಯಮಗಳ ಸೋಗಿನಲ್ಲಿ, ಶ್ರೀಮಂತಿಕೆಯ ಡಬಡ್ಡಾಳಿಕೆಯಲ್ಲಿ, ಏನೆಲ್ಲ ಅನಾಚಾರ ಗಳನ್ನು ಮಾಡುತ್ತಿರುವ ಸಂಘದಿಂದ, ದೂರಮಾಡಲ್ಪಟ್ಟವನು. ಸಮಾ ಜದ ಶತ್ರು ನಾನು.... ನಾ ಬಲ್ಲೆ....ನಿನ್ನನ್ನೀ ದಾರಿಗೆ ತಳ್ಳಿದ ಸಂಘವನ್ನು ಬಲ್ಲೆ !.... ನಿನ್ನಲ್ಲಿ ನಾನು ಕಾಣುವುದು ವೇಶ್ಯೆಯಲ್ಲ ನಿಜ, ರಾಕ್ಷಸರ ಕೈಯಲ್ಲಿಯ ಮಾನವೀಯತೆಯ ಮಾಂಸದ ಮುದ್ದೆಯನ್ನು ! ನೀನು ನನ್ನನ್ನಾಕರ್ಷಿಸುತ್ತಿಲ್ಲ ನಿಜ ......."

" ನಿಜ ಹೇಳಿ ಮೂರ್ತಿ.... ವೇಶ್ಯೆ ನಾನೆಂಬ ಅಸಹ್ಯತೆಯಿಲ್ಲವಷ್ಟೆ ನಿಮಗೆ ?"

" ಇಲ್ಲ ಶ್ಯಾಮಾ........ ನಂತೆಯೇ ನೊಂದ ಹೃದಯವು ನಿನ್ನ ದೆಂದು ಅಂತಃಕರಣ.... ! "

"ಮೂರ್ತಿ....ಈಗಾಗಲೇ, ಈ ವಯಸ್ಸಿನಲ್ಲೇ ನಿಮಗೆ ಜೀವನದ ಬಗ್ಗೆ ಜಿಗುಪ್ಸೆಯೇಕೆ ? ನಿಮ್ಮ ಕಷ್ಟವೇನು ? ನಿಮ್ಮಲ್ಲಿಯ ದುಃಖವನ್ನು ಅಣುಮಾತ್ರವಾದರೂ ಕಡಿಮೆ ಮಾಡಬಲ್ಲೆನಾದರೆ.... ನೀವು ಬಲ್ಲಿರಾ ಮೂರ್ತಿ....ಇಷ್ಟು ವರ್ಷಗಳೊಳಗೆ ಇಂದೇ ನಾನು ಎಲ್ಲರಂತೆ ಒಬ್ಬ ಮನುಷ್ಯಳು ಎಂದು ನನಗೆ ಮನವರಿಕೆಯಾದದ್ದು ! ನಿಮ್ಮ ಸಾನ್ನಿಧ್ಯದಲ್ಲಿ ಹೃದಯವು ಹಗುರವಾದಂತಿದೆ....ನಿಮ್ಮ ಬಗ್ಗೆ ಕೇಳಲು ನನ್ನ ಕುತೂಹಲ ವನ್ನು ತೀರಿಸಬಲ್ಲಿರಾ ?

" ಅಯ್ಯೋ ಹುಚ್ಚಿ ! ನಾನು ಯಾರೋ, ನೀನು ಯಾರೋ ? ಸೂರ್ಯನಸ್ತಮಿಸಿ ಕತ್ತಲಾಗುವ ವೇಳೆಗೆ, ನನ್ನ ದಾರಿ ಯಾವುದೋ, ನಿನ್ನ ದಾರಿ ಯಾವುದೋ ಅರಿಯೆವು. ಹಾಗಿರುವಾಗ, ಶ್ಯಾಮಾ ನಿನಗೇಕೆ ಆತುರತೆ ? ನನ್ನ ದುಃಖವನ್ನು ಯಾರೂ ಹರಿಯಲಾರರು........ನನ್ನಲ್ಲೆ ಬೆಳೆದುಕೊಂಡು ಬಂದ ಆ ನೋವು, ನನ್ನೊಟ್ಟಿಗೇನೇ ಬೂದಿಯಾಗ ಬೇಕು...."

" ಅರಿತವರು ನೀವು, ಮೂರ್ತಿ.... ಜೀವನದಲ್ಲಿಯ ಇಂತಹ ಪ್ರತಿ

ಯೊಂದು ಆಕಸ್ಮಿಕತೆಗೂ ಏನಾದರೊಂದು ಅರ್ಥವಿರಲೇಬೇಕು. ಯಾವ ಜನ್ಮದ ಆಪ್ತಬಾಂಧವ್ಯವೋ, ಇಂದು ನನ್ನ ಹೃದಯ ನಿಮ್ಮನ್ನು ಕಂಡಾಗ ಮಿಡಿಯಿತು .. ಅಂತೇ ಆ ಆಕರ್ಷಣೆ....''

'' ಓ ! ಬಹಳ ಕಲಿತವಳಿದ್ದೀ ನೀನು.... ಇಷ್ಟು ಕಲಿತವಳು ಈ ವೃತ್ತಿಯೇತಕ್ಕಾಗಿ . . ಶ್ಯಾಮಾ ? ''

'' ಬೇಡ ಮೂರ್ತಿ... ಕೆದರಬೇಡಿ ನನ್ನ ಜೀವಿತವನ್ನು.... ಕೆದರಿ ದಷ್ಟೂ ಹಾಳು .. ರೊಚ್ಚಿಗೆ....ನಿಮ್ಮೊಟ್ಟಿಗಿರುವ ಈ ಒಂದೆರಡು ನಿಮಿಷ ಗಳಾದರೂ ಆ ಪವಿತ್ರತೆಯನ್ನು ಅನುಭವಿಸಲು ಬಿಡಿ....ಹೇಳಿ ಮೂರ್ತಿ ನಿಮ್ಮ ಬಗ್ಗೆ ...''

'' ಶ್ಯಾಮಾ... ನಾನು ಯಾರೊಡನೆಯೂ ಮಾತನ್ನಾಡಿ ಇಂದಿಗೆ ಮೂರು ವರ್ಷಗಳಾದವು .. .... ಮಾತು ಮರೆತೇ ಹೋಯಿತೇನೋ ಎಂಬಂತಿತ್ತು ನೋಡು ಅಭ್ಯಾಸವಿಲ್ಲದೆ, ಆಯಾಸವೆಷ್ಟು ಬರುತ್ತಿದೆ.... ಇನ್ನು ಸ್ವಲ್ಪ ಕಾಫಿ ಕೊಡಬಲ್ಲೆಯಾ ? ....ಓ ! .... ಪಾಪ !....ಹಾಲಿಲ್ಲ ವಾದೀತು.... ಹೋಗಲಿ....ಆ ಕಷಾಯವನ್ನೇ ಕೊಡು. ''

ನಾನು ಕೊಟ್ಟ ಕಷಾಯವನ್ನು ಒಂದು ಗುಟುಕಿನಲ್ಲೇ ಕುಡಿದ. ಬೆವರಿದ ಹಣೆಯನ್ನು ಒರೆಸಿಕೊಳ್ಳುತ್ತಾ '' ಶ್ಯಾಮಾ, ನಾನು ಜೈಲಿನಿಂದ ಈ ದಿನವೇ ಬಿಡುಗಡೆಯಾಗಿ ಬಂದೆ ಎಂದರೆ ಬೆಚ್ಚುತ್ತೀಯೇನೋ?''

'' ಇಲ್ಲ ಮೂರ್ತಿ. ಜೀವನದಲ್ಲಿ ಅಂತಹುದಾವುದೋ ಅಪಘಾತ ವಾಯಿತೆಂದೇ ಇಂದು ನಿಮಗೀ ಜಿಗುಪ್ಸೆ ... ಮೂರ್ತಿ, ಆ ಅಪಘಾ ಗಳಿಂದ ನಿಮ್ಮ ಹೃದಯ ಪಾಷಾಣವಾಗಲಿಲ್ಲವಾಗಲಿ, ಮಾನವತ್ವದಿಂದ ತುಂಬಿದೆ.... ಇಲ್ಲದೇ ಆದರೆ ವೇಶ್ಯೆಯಲ್ಲೂ ಒಂದು ಹೃದಯವನ್ನೂ ವ್ಯಕ್ತಿತ್ವವನ್ನೂ ಕಂಡು ಸರಿಸಮಾನವಾಗಿ ಮಾತನಾಡಲಾದರೂ ಸಾಧ್ಯವೇ ........ಮೂರ್ತಿ.... ನೀವು ಬಲ್ಲಿರಾ.... ನನ್ನಲ್ಲಿ ಎಲ್ಲರೂ ಕಾಣುವುದು ಬರೇ ಭೋಗದ ಹೆಣ್ಣನ್ನು! ಹುಣ್ಣಾದ ಹೃದಯವನ್ನಲ್ಲ ! ...ತಡೆ ಬಂದೆ. ನಿಮ್ಮ ಕಥೆಗೆ.... ಹೇಳಿ ಮೂರ್ತಿ....''

'' ಜೈಲಿನಲ್ಲಿರಬೇಕಾದರೆ, ನಾನೊಬ್ಬ ಮಹಾಪರಾಧಿಯಾಗಿರ ಬೇಕೆಂದೂ ನಿನಗೆ ತೋರುವುದಿಲ್ಲವೆ ? ''

'' ಇಲ್ಲ....ಮೂರ್ತಿ... ಊಹಿಸಬಲ್ಲೆ. ಯಾರ ತಪ್ಪಿಗೊ ನಿಮಗೆ

ಜ್ಯಲು ... ಪ್ರಪಂಚವನ್ನು ಚೆನ್ನಾಗಿ ಬಲ್ಲೆ.... ಹೇಳಿ....''

" ಹೇಳಬೇಕೆ ? .. ಹೌದು ... . ಹೇಳಲೇಬೇಕು ನಿನಗಾದರೆ ನನ್ನ ನೋವು ಅರ್ಥವಾದೀತು ಹೇಳಿದನಂತರ ನನಗೂ ಹಗುರವಾದೀತು."

" .... .. ... .... "

" ನಾನು ಕಾಲೇಜಿನಲ್ಲಿ ಓದುವ ಕಾಲದಲ್ಲಿ, ರಮೆಯನ್ನು ಪ್ರೇಮಿಸಿದೆ ಇಬ್ಬರೂ ಶ್ರೀಮಂತರಲ್ಲದಿದ್ದರೂ ನಮ್ಮ ಪವಿತ್ರ ಪ್ರೇಮದಲ್ಲಿ ಇಡೀ ಪ್ರಪಂಚವನ್ನೇ ಮರೆತಿದ್ದವು. ರಮೆಯ ಆ ನಿಶ್ಚಲಪ್ರೇಮ ನನಗೆ ಜೀವನದಲ್ಲಿ ಉತ್ಸಾಹ, ಹುರುಪನ್ನು ಕೊಟ್ಟಿತು. ಬಿ ಎ ಪಾಸಾದನಂತರ ಎಲ್ಲೆಲ್ಲೊ ಅಲೆದಾಡಿ, ಕೊನೆಗೆ ರೇಷನ್ ಆಫೀಸಿನಲ್ಲಿ ಐವತ್ತುರೂಪಾಯಿ ಗುಮಾಸ್ತೆ ಕೆಲಸಕ್ಕೆ ಸೇರಿದೆ ರಮೆ ದೇವತಾಸ್ತ್ರೀ. ಅವಳಿಗೆ ಬೇಕಾದದ್ದೆಲ್ಲಾ ನನ್ನ ನಿರಂತರ ಪ್ರೀತಿ! ಬಡತನದ ದಾರುಣ ದುಃಖವನ್ನು ಬಣ್ಣಿಸಿ, ತೋರಿಸಿ ನನ್ನನ್ನು ಮದುವೆಯಾಗುವುದು ಬೇಡವೆಂದರೂ ಕೇಳದೆ, ನನ್ನೊಡನೆ ಬಡತನವನ್ನೂ ನಗುತ್ತಲೇ ಪ್ರೀತಿಯಿಂದಲೇ ಅಪ್ಪಿದಳು. ನಮ್ಮ ಪ್ರಾಣಗಳೆರಡೂ ಒಂದಾಗಿದ್ದವು ರಮೆ ಜಾಣತನದಿಂದ ಸಂಸಾರ ಮಾಡುತ್ತಿದ್ದಳು. ಏಕೆ ಶ್ಯಾಮಾ ಕಣ್ಣೀರು ?

" ಏನೂ ಇಲ್ಲ... ಹೇಳಿ. ಆ ರಮೆ ಧನ್ಯಜೀವಿ ! "

ಮೂರ್ತಿ ಮುಂದುವರಿಸಿದನು:

" ನನ್ನ ಆಫಿಸರು ಬಲು ಲಂಚಕೋರ. ನನಗೆ ತಿಳಿದಿದ್ದೂ ನಾನು ನಿಸ್ಸಹಾಯಕನಾಗಿದ್ದೆ. ನಮ್ಮ ಸಂಸಾರ ಅತಿ ಕಷ್ಟದಿಂದ ನಡೆಯುತ್ತಿತ್ತು. .. ಇಷ್ಟರಲ್ಲೇ ನಮಗೊಂದು ಮಗು. ಮಗುವಿಗೆ ಎದೆಹಾಲು ಸಾಲದೆ ಯಾವಾಗಲೂ ಕಾಯಿಲೆಯಿಂದ ನರಳುತ್ತಿತ್ತು ಔಷಧೋಪಚಾರಗಳಿಗೇನೇ ನಮಗೆ ಬರುವ ಹಣವೆಲ್ಲಾ ಸರಿಹೋಗುತ್ತಿತ್ತು. ನನ್ನ ಆಫೀಸರಿಗೆ ನನ್ನನ್ನು ಕಂಡರೆ ಸರಿಹೋಗುತ್ತಿರಲಿಲ್ಲ. ಅವರ ಆಟಕ್ಕೆಲ್ಲಾ ನಾನು ತಾಳಹಾಕುತ್ತಿರಲಿಲ್ಲವೆಂದು ನನ್ನನ್ನು ಕಂಡರೆ ಉರಿದು ಬೀಳುತ್ತಿದ್ದರು. ಬಾಣಂತಿಯಾದ ರಮೆ, ಸಾಕಷ್ಟು ಉಪಚಾರದೂಟವಿಲ್ಲವೆಂದು, ದಿನೇ ದಿನೇ ಒಣಗಿ ಹೋಗುತ್ತಿದ್ದಳು ಮಗುವು ಕೆಲವು ತಿಂಗಳು ಮಾತ್ರವೇ ಜೀವಿಸಿ ಸತ್ತುಹೋಯಿತು. ಇನ್ನು ನನ್ನ ರಮೆಯ ಜೀವಿತವೇ ಬದಲಾಯಿಸಿತು.''

" ಪಾಪ ! "

" ರಮೆಗೆ ಟಿ.ಬಿ ಪ್ರಾರಂಭವಾಯಿತು. ಅವಳನ್ನು ಸ್ಯಾನಿಟೋರಿಯಂಗೆ ಸೇರಿಸಿದ್ದೆ ಕಾಯಿಲೆ ಇಳುಮುಖವಿಲ್ಲದೆ ಜಾಸ್ತಿಯಾಗುತ್ತಲೇ ಇತ್ತು ಹೀಗಿರುವಲ್ಲಿ, ನಮ್ಮ ಆಫೀಸರ್ ಮೇಲೆ ಕೆಲವು ಆಪಾದನೆಗಳು ಬಂದವು. ನಲವತ್ತು, ನಲವತ್ತೈದು ಚೀಲ ಅಕ್ಕಿ, ಲೆಕ್ಕಕ್ಕೆ ಬರಲಿಲ್ಲ. ಅಕ್ಕಿ ಕೊಡುತ್ತಿದ್ದವನೂ ನಾನೇ.... ಲೆಕ್ಕವಿಡುತ್ತಿದ್ದವನೂ ನಾನೇ. ಆದರೆ ಆಫೀಸರ್ ಮುಂದೆ ಏನು ಹೇಳಲೂ ಬರದು. ಬರುವ ಐವತ್ತು ರೂಪಾಯಿಗಳಿಗೆ ಚಕ್ರಬರುತ್ತದೆಯೇನೋ ಎಂಬ ಭಯದಿಂದ ಅವನ ಅಕ್ರಮಗಳನ್ನು ಬಯಲುಹಾಕದೆ ಇದ್ದೆ."

" ........ "

" ಅಂದು, ರಮೆಯು, ರಕ್ತರಕ್ತವೇ ವಾಂತಿ ಮಾಡುತ್ತಿದ್ದಳು. ಪಕ್ಕದಲ್ಲೇ ನಾನು ಕುಳಿತಿದ್ದೆ ನನ್ನ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡು, ನನ್ನನ್ನೇ ನೋಡುತ್ತಾ ಚಲಿಸದೇ ಮಲಗಿದ್ದಳು.. ಕೆಮ್ಮು ಹೆಚ್ಚಾಗಿತ್ತು........ ತೀರ ಬಳಲಿದ್ದಳು .. .... ಕಣ್ಣು ತುಂಬಾ ನೀರು ತುಂಬಿತ್ತು . . "

ನನಗೂ ಕಣ್ಣಲ್ಲಿ ನೀರು ಸುರಿಯುತ್ತಲೇ ಇತ್ತು.... ಮೂರ್ತಿ ಕೆಲ ಹೊತ್ತು ತನ್ನ ಕೈಗಳಲ್ಲಿ ಮುಖ ಮುಚ್ಚಿಕೊಂಡು ಕುಳಿತನು ಮತ್ತೆ ಹೇಳತೊಡಗಿದನು.... ಧ್ವನಿಯೇಕೋ ಗಡುಸಾಗಿತ್ತು .... ಉದ್ವೇಗದಿಂದಲೋ ಏನೋ, ಕಂಠದಲ್ಲಿಯ ನರಗಳು ಉಬ್ಬಿದ್ದವು

" ಆಗ ನಮ್ಮ ಆಫೀಸಿನಿಂದ ಜವಾನನೊಬ್ಬನು ಬಂದನು. ಒಡನೆಯೇ ಬರಬೇಕಾಗಿದೆಯೆಂದು ಹೇಳಿದನು. ರಮೆ ಬಿಡಲೊಲ್ಲಳು........ ಅವಳಿಗೆ ಸಮಾಧಾನಮಾಡಿ, ಅವಳ ಕಣ್ಣೀರೊರಸಿ, ರಕ್ತಹೀನವಾದ ಅವಳ ತುಟಿಗಳನ್ನು ಮುತ್ತಿಟ್ಟು, ಬಿಡಲಾರದೇ. ಎದ್ದು ಹೊರಟೆ. ಕಾಲು ಮುಂದಿಡುವುದೇ ಕಷ್ಟವಾಗಿತ್ತು. ಅನಾಹುತವೊಂದನ್ನು ಎದುರುಗೊಳ್ಳಬೇಕಾಗಿದೆಯೆಂದು ಅಂತರ್ವಾಣಿ ಹೇಳುತ್ತಿತ್ತು.... "

ಮೂರ್ತಿಯ ಗಂಟಲು ಒಣಗಿತ್ತು. ಅಂತೇ, ಎದ್ದು ಒಂದು ಗ್ಲಾಸಿನಲ್ಲಿ ನೀರು ಕೊಟ್ಟೆ. ಗಟಗಟನೆ ಒಂದೇಸವನೆ ಕುಡಿದನು.

ಮೂರ್ತಿ ಹೇಳುತ್ತಿದ್ದ:

''ಆಫೀಸಿನಲ್ಲಿ ಎನ್‌ಕ್ವಾಯರಿ ಆಗುತ್ತಿತ್ತು. ಲೆಕ್ಕಕ್ಕೆ ಬಾರದ ಆ ಅಕ್ಕಿ ಚೀಲಗಳೆಲ್ಲಾ ನಾನೇ ಬ್ಲ್ಯಾಕ್‌ಮಾರ್ಕೆಟ್ಟಿನಲ್ಲಿ ಮಾರಿಕೊಳ್ಳಲು ಉಪಯೋಗಿಸಿದೆನೆಂದು ನಮ್ಮ ಆಫೀಸರ್ ಮತ್ತು ಅವರ ಮೇಲ್ಪಟ್ಟ ಆಫೀಸರೂ ಸಹ ಸೇರಿ ತೀರ್ಮಾನಿಸಿದರು. ಒಮ್ಮಿಂದೊಮ್ಮೆಯೇ, ನನಗೆ ಕೋಪ, ದುಃಖ ಉಕ್ಕಿಬಂತು. ಆ ಉದ್ರೇಕದಲ್ಲಿ, ಬ್ಲ್ಯಾಕ್ ಮಾರ್ಕೆಟ್ಟಿನಲ್ಲಿ ನಮ್ಮ ಆಫೀಸರ್ ಅಕ್ಕಿಯನ್ನು ಯಾರು ಯಾರಿಗೆ ಕೊಟ್ಟನೆಂದೂ, ಬರೀ ಲಂಚಕೋರನೆಂದೂ ಕೂಗಿ ಹೇಳಿದೆ....ಅನ್ಯಾಯವಾಗಿ, ಒಡಜೀವಿಯೊಬ್ಬನನ್ನು, ನಿರಪರಾಧಿಯೊಬ್ಬನನ್ನು ತೊಂದರೆ ಮಾಡುತ್ತಿದ್ದಾರೆಂದು ಬೊಬ್ಬೆಯಿಟ್ಟೆ ! ನನ್ನ ಕೂಗನ್ನು ಕೇಳುವರಾರು? ಸಹೃದಯ ಪ್ರಾಮಾಣಿಕತೆ ಮತ್ತು ಕರ್ತವ್ಯನಿಷ್ಠೆಗಳು ಮಾಡಲಾರದ ಕೆಲಸವನ್ನು ಹಣ ಮಾಡಿತ್ತು. ಸರಿ....ಹಾಕಿದರು ಕೈಗಳಿಗೆ ಸಂಕಲೆ ಜೈಲಿಗೆ ಕರೆದೊಯ್ಯಲು. ರಮೆಯನ್ನು ಒಂದು ಬಾರಿ ನೋಡಬೇಕೆಂದು ಪ್ರಾರ್ಥಿಸಿದೆ.... ನಿಷ್ಕರುಣಿಗಳು....! ಒಮ್ಮೆಲೇ ಜೈಲಿಗೆ ಕರೆದುಕೊಂಡು ಹೋದರು....

''ಜೈಲಿಗೆ ಹೋದ ಐದು-ಆರು ದಿನಗಳ ನಂತರ ನನ್ನ ರಮೆಯು ಈ ಪ್ರಪಂಚವನ್ನು ಬಿಟ್ಟುಹೋದಳೆಂಬ ಸುದ್ದಿ ತಂದರು. ಶ್ಯಾಮಾ, ನನಗೆ ಹೇಗಾಯಿತು ಗೊತ್ತೆ ? ಇಡೀ ಪ್ರಪಂಚವನ್ನೇ ಚಂಡಾಡಬೇಕೆನ್ನಿಸಿತು. ಯಾರ ಸುಖಕ್ಕಾಗಿ, ಯಾರನ್ನು ಬಲಿ ಕೊಟ್ಟಾಯಿತು ? ನನ್ನ ರಮೆ ಹೋದನಂತರ ನಾನೇನಾದರೇನು ? ಎಲ್ಲಿದ್ದರೇನು ?....''

ನನಗೆ ಮರುಮಾತಾಡಲು ಸಾಧ್ಯವಾಗಲಿಲ್ಲ.... ಹೃದಯವು ಡವಡವನೆ ಹೊಡೆಯುತ್ತಿತ್ತು....ಕಣ್ಣೀರು ತಾನಾಗಿ ಹರಿದು ಹೋಗುತ್ತಿತ್ತು.... ಮೂರ್ತಿಯ ಮುಖವನ್ನೇ ನೇವರಿಸುತ್ತಾ ಕುಳಿತೆ.. ....ನೊಂದ ಮಗುವೊಂದನ್ನು ಸಮಾಧಾನಪಡಿಸಿದ ತಾಯಿಯ ತೃಪ್ತಿ ಎಂತಹುದೆಂದು ನಾನು ಆ ಅನುಭವದಲ್ಲಿ ಕಂಡೆ.... ಮೂರ್ತಿ ಒಮ್ಮೆಯೇ ಮೌನವಾಗಿ ಕುಳಿತನು.... ಅಸಹನೀಯವಾದ ದುಃಖದ ಸ್ಮೃತಿ ಸಂಚಯ.... ಜೈಲುವಾಸ, ಪತ್ನಿಯ ಮರಣ.. ಮೂರ್ತಿಯ ಜಗತ್ತು ಬರೀ ಅಂಧಕಾರಮಯವಾಗಿತ್ತು....ಅಸಹನೀಯವಾದ ನೋವೊಂದು ಮುಖದಲ್ಲಿ ವ್ಯಕ್ತವಾಗುತ್ತಿತ್ತು.... ಅವನನ್ನು ಹೇಗೆ ಸಮಾಧಾನಪಡಿಸುವುದು ಎಂದು ತಿಳಿಯದೆ ಹೋಯಿತು.... ಉಕ್ಕಿ ಉಕ್ಕಿ ಬರುತ್ತಿದ್ದ ದುಃಖವನ್ನು ತಡೆಯ

ಲಾರದೆ ಬಿಕ್ಕಳಿಸಿದೆ....

ಅರ್ಧತಾಸು ಹಾಗೆಯೇ ಮೌನವಾಗಿ ಕುಳಿತಿದ್ದ ಮೂರ್ತಿ, ಒಮ್ಮಿಂದೊಮ್ಮೆ ಎದ್ದು " ಇನ್ನು ಹೊರಡಲೆ ಶ್ಯಾಮಾ ? " ಎಂದ.

ನಾನು ಬೆಚ್ಚಿ ಎದ್ದುನಿಂತು, ಅವನ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡೆ.

" ಎಲ್ಲಿಗಾದರೂ ಹೋಗುತ್ತೀರಿ ಮೂರ್ತಿ....? "

" ಏನೋ ? ಇಷ್ಟು ದಿನದ ಜೈಲುವಾಸ, ಆ ಪ್ರಶ್ನೆಗೆ ಅವಕಾಶ ಕೊಡಲಿಲ್ಲ ... ಇಂಥಾ ಪ್ರಶ್ನೆ ಎದ್ದು ಭೂತದಂತೆ ಇದಿರಾಗುತ್ತಿದೆ........ ಶ್ಯಾಮಾ ... ನೀನು ದಯಾಮೂರ್ತಿ .. ಅಂತೇ, ಎಲ್ಲರೂ ದೂರಮಾಡಿದ ದಾರಿಹೋಕನೊಬ್ಬನನ್ನು ಕರೆತಂದೆ ನನ್ನ ದುಃಖವನ್ನೆಲ್ಲಾ, ಕಷ್ಟವನ್ನೆಲ್ಲಾ ಸಂಗಾತಿಯಂತೆ, ಸಹನೆಯಿಂದ, ಮರುಕದಿಂದ ಕೇಳಿದೆ........ ಬೆಂಡಾಗಿದ್ದ ನನ್ನ ಹೃದಯವನ್ನು ನಿನ್ನ ಆತ್ಮೀಯತೆಯ ಕಣ್ಣೀರಿಂದ ತೋಯ್ಸಿದೆ.... "

" ಮೂರ್ತಿ....ಅಂತೇ, ನನ್ನೊಡನೆಯೇ ಇರಬಾರದೇಕೆ? ....ಇಂದಿನಿಂದ ನಾನು ಹೊಸ ಶ್ಯಾಮಳು.... ನನ್ನಲ್ಲಿ ಹೊಸ ಜೀವನವೊಂದನ್ನು ತುಂಬಿದಿರಿ ... ಇಲ್ಲೇ ನಿಲ್ಲಿ ಮೂರ್ತಿ."

" ಇಲ್ಲ ... ಶ್ಯಾಮಾ ... ನಾನು ಹೊರಡುತ್ತೇನೆ ಬಿಡು. ರಮೆಯ ಜತೆಗೆ ಶ್ಯಾಮಳನ್ನೂ ದಿನದಿನವೂ ನೆನೆಯುತ್ತೇನೆ. ನಿನ್ನ ಉಪಕಾರಕ್ಕೆ ನಾನು ಚಿರಋಣಿ.... ಶ್ಯಾಮಾ.... ನಿನ್ನ ದಯಾರ್ದ್ರ ಹೃದಯವನ್ನು ಸಂಘವು ಗುರುತಿಸಲಾರದು...."

" ಮತ್ತೆ ನನಗೆ ಮಾರ್ಗ....? ಮೂರ್ತಿ....ಬೇಡ ಹೋಗಬೇಡಿ.... ಇಲ್ಲೇ ನಿಲ್ಲಿ.... "

" ಇಲ್ಲ ... ಶ್ಯಾಮಾ....ಪವಿತ್ರಾತ್ಮ ರಮೆಗೆ ನಾನು ಸಲ್ಲಿಸಬೇಕಾದ ಗೌರವವೆಂದರೆ, ನನ್ನ ಇಡೀ ಜೀವಿತಕಾಲ ನಾನು ನೋವಿನೊಟ್ಟಿಗೆಯೇ ಹೆಣಗಾಡಬೇಕು.... ಅವ್ಯಕ್ತ ಭವಿಷ್ಯವು ಅಂಧಕಾರಮಯವಾಗಿದ್ದರೂ, ಬೆಳಕೊಂದು ಕಾಣಲೇಬೇಕು.... ಶ್ಯಾಮಾ.... ಉಪವಾಸವಿರಬೇಡ.... ನನ್ನಲ್ಲಿರುವುದೆಲ್ಲಾ ಇಷ್ಟೇ.... ತೆಗೆದುಕೋ.... " ಎಂದು ಕೈಗಡಿಯಾರವೊಂದನ್ನೂ, ಎರಡು ರೂಪಾಯಿಗಳ ಚಿಲ್ಲರೆಯನ್ನೂ ಮೇಜಿನ

ಮೇಲಿಟ್ಟು ಹೊರಡಲನುವಾದನು.

ಮೂರ್ತಿಯು ಹಾಗೆ ಮಾತಾಡುತ್ತಿದ್ದರೆ, ಅವನ ಕಣ್ಣಲ್ಲಿಯ ಉಜ್ವಲತೆಯೊಂದು ನನ್ನನ್ನು ಹಿಂದಕ್ಕೆ ಸರಿಸಿತು....

ಧೈರ್ಯವನ್ನೆಲ್ಲಾ ಮೂಟೆಗಟ್ಟಿಕೊಂಡು ಕೇಳಿದೆ, " ಮತ್ತೆಂದು ಬರುತ್ತೀರಿ ಮೂರ್ತಿ? ನನ್ನ ಜೀವನದ ಬಗ್ಗೆಯು ತಿರಸ್ಕಾರದಿಂದ ಹೊರಡ ಲನುವಾಗುತ್ತಿದ್ದೀರಲ್ಲವೆ ? "

" ಇಲ್ಲ. ಶ್ಯಾಮಾ, ನಾನು ಹೊರಡಲೇಬೇಕಾಗಿದೆ ಅಂತೇ ಹೊರಟಿರುವೆ. ನಿನ್ನ ವೃತ್ತಿಯಲ್ಲಿ ನಿನಗೆ ಹೃದಯವಿಲ್ಲವೆಂದು ನಾ ಬಲ್ಲೆ.... ಹೊಟ್ಟೆ ತುಂಬಬೇಕಲ್ಲವೆ ? ಹಸಿದ ಕರುಳಿನ ಕೂಗಿನಲ್ಲಿ, ಬದುಕಿನ ಅರ್ಥವನ್ನು ತಿಳಿದುಕೊಳ್ಳುವಷ್ಟು ಚೇತನವಿರುವುದಿಲ್ಲ .. ಶ್ಯಾಮಾ.... ಹೋಗಿಬರುತ್ತೇನೆ." ಎಂದು ನನ್ನ ಕೈ ಅಮುಕಿ ಹೊರಟೇಬಿಟ್ಟನು.

ಎಷ್ಟು ಹೊತ್ತೊ ಹಾಗೇ ಕುಳಿತಿದ್ದೆ ಮೂರ್ತಿಯ ಜೀವನವೆಲ್ಲಾ ತೆರೆಯಮೇಲೆ ನೋಡಿದಂತಾಯಿತು.....ರಮಾ ಮೂರ್ತಿಯರ ಪ್ರಣಯ, ಪ್ರೇಮ, ಒಲುಮೆಯ ಸಂಸಾರ, ಬಡತನ, ರೋಗ, ವಿರಹ, ... ಸಾವು.. . ಎಲ್ಲ ..ಅಬ್ಬಾ .. ! ನನ್ನ ಹೃದಯವನ್ನು ಕದಡಿದಂತಾಯಿತು. ನನ್ನ ಬಗ್ಗೆ, ನನ್ನೆಲ್ಲವನ್ನೂ ಕುರಿತು, ನನಗೆ ಮರೆತೇ ಹೋಗಿತ್ತು.... ಮೂರ್ತಿಯ ಜೀವನವೇ ಕಣ್ಣುಮುಂದೆ ಕುಣಿಯುತ್ತಿತ್ತು.... ಚಿರಂತನ ಅಸಹನೀಯ ದುಃಖದ ಗೂಡಾಗಿತ್ತು ಅವನ ಹೃದಯ! . .ಅಂತಹ ಹೃದಯದಲ್ಲಿ ಆಶಾ ಜ್ಯೋತಿಯನ್ನು ಬೆಳಗಿಸುವಷ್ಟು ಶಕ್ತಿ ಸಾಮರ್ಥ್ಯಗಳು ನನ್ನಲ್ಲಿಲ್ಲದೇ ಹೋಯಿತು.... ಅಂತೇ ಹೊರಟುಹೋದನು. . ಆದರೂ ನನ್ನ ಸ್ಮೃತಿ ಪಥದಲ್ಲಿ ಚಿರಸ್ಥಾಯಿಯಾಗಿ ನಿಂತನು... ನನ್ನಲ್ಲಿ ಅಡಗಿಹೋದ ವ್ಯಕ್ತಿತ್ವ ವೊಂದನ್ನು ತೋರಿಸಿಕೊಟ್ಟು ಹೊರಟು ಹೋದನು. ನನ್ನೊಡನೆ, ಅವನಿದ್ದುದೆಲ್ಲಾ ಎರಡು ಘಂಟೆಗಳ ಕಾಲವಷ್ಟೆ ! ಆದರೂ ಆ ಸಹವಾಸ ದಲ್ಲಿ, ಜನ್ಮಜನ್ಮಾಂತರದ ಪರಿಪೂರ್ಣತೆಯನ್ನು ಅನುಭವಿಸಿದ್ದೆ. ಅವನ ಸಾನ್ನಿಧ್ಯದಲ್ಲಿದ್ದಷ್ಟು ವೇಳೆಯೂ ಮಾನವಜನ್ಮದ ಪವಿತ್ರತೆಯನ್ನು ಕಂಡೆ....

ಬರೀ ಕಾಮುಬೇಟೆಗಾಗಿ ಬರುತ್ತಿದ್ದ ವಿಲಾಸಲೋಲರನ್ನಲ್ಲದೆ, ಮಾನವತ್ವವೇ ಮೂರ್ತಿಮಂತಾಗಿ ಬಂದಿದ್ದ ದೇವತಾಮನುಷ್ಯನನ್ನು

ಅವನಲ್ಲಿ ಕಂಡೆ.... ತೀರ, ಆ ಸಂತೋಷದಿಂದ ಚೇತರಿಸಿಕೊಳ್ಳುವುದಕ್ಕೆ ಮುಂಚೆಯೇ ಅವನು ಹೊರಟು ಹೋಗಿದ್ದನು.... ಮತ್ತೆ ಏಕಾಕಿನಿಯಾದೆ....ಆದರೂ ಆ ನೆನಹು ...ಮಧುರ ಸ್ಮೃತಿ, ನನ್ನಲ್ಲಿ ತುಂಬಿತ್ತು.... ಹಾಗೇ ಕೂತಿದ್ದೆ ಕಿಟಿಕಿಯಿಂದ ಎರಡು ಗುಬ್ಬಿಗಳು ಹಾರಿಬಂದು ಒಳಗಿನ ಕಿಟಿಕಿಯಂಚಿನಲ್ಲಿ ಕುಳಿತು 'ಕಿಚಕಿಚ'ಲಾಡುತ್ತಿದ್ದವು. ಸಂಜೆ ಮರೆಯಾಗುತ್ತ ಬಂದಿತು. ಕತ್ತಲಾವರಿಸುತ್ತಿತ್ತು. ಒಂದು ಗುಬ್ಬಿ ಹಾರಿಹೋಯಿತು ... ಮತ್ತೊಂದು ಹಾರಿ, ದೂಲವೊಂದರ ಮೇಲೆ ಕುಳಿತುಕೊಂಡಿತು, ಏಕಾಕಿನಿಯಾಗಿ ನನ್ನ ಹಾಗೇ ! ....ಎದ್ದು ದೀಪ ಹಚ್ಚಲು ಸಹ ನನ್ನಲ್ಲಿ ಚೈತನ್ಯವಿರಲಿಲ್ಲ ... ಕತ್ತಲು.... ಎಲ್ಲೆಲ್ಲೂ ಕತ್ತಲಾವರಿಸುತ್ತಿತ್ತು ... ರಾತ್ರಿಯಾಗುತ್ತ, ಹೊರಗಿನ ಜೀವನಾಡಿಗಳೆಲ್ಲ ಮುದುಡಿಕೊಂಡಂತೆ, ಮೌನವಾವರಿಸುತ್ತಿತ್ತು .. ಆ ಗಂಭೀರ ಮೌನದಲ್ಲಿ ನನ್ನ ಹೃದಯದ "ಮೂರ್ತಿ....ಮೂರ್ತಿ...."ಎಂಬ ಕೂಗೊಂದೇ ಗಟ್ಟಿಯಾಗಿ ಕೇಳುವಂತಿತ್ತು.... ಮನಸ್ಸು ಹೊಯ್ದಾಡುತ್ತಲೇ ಇತ್ತು, ಮೂರ್ತಿಯ ಸಾನ್ನಿಧ್ಯದಲ್ಲಿ ಕಂಡ ಬೆಳಕನ್ನೇ, ನಿರಾಂತಕವಾಗಿ ಕಾಪಾಡಿಕೊಳ್ಳಬೇಕೆಂದು....

ಬಾಗಿಲು 'ಧಡಧಡ'ನೆ ತಟ್ಟುವ ಶಬ್ದ.

" ಹೂ ತೆಗೀ.... ಸುಂದರೀ.... ಬಾಗಿಲ ತೆರೆ ..."

" ಚೆಲ್ಲಾಡುವಷ್ಟು ಹಣ!....ತೆಗೀ ಬಾಗಿಲು...."ಎಂದು ಕುಡಿದು ಬಂದ ಕಾಮುಕರ ಅಟ್ಟಹಾಸದ ಕರೆ....

ಒಮ್ಮೆಯೇ ಮೈಯೆಲ್ಲಾ ಬೆವರಿತು ....... ಗಟ್ಟಿಯಾಗಿ, ಎರಡು ಕೈಗಳಿಂದಲೂ ಕಿವಿಗಳನ್ನು ಮುಚ್ಚಿಕೊಂಡು, ದಿಂಬಿನಲ್ಲಿ ಮುಖವನ್ನು ಹುದುಗಿಸಿ ಮಲಗಿಕೊಂಡೆ ....... ಭದ್ರವಾಗಿ ಕದಲದೆ .. ! " ಅವ್ಯಕ್ತ ಭವಿಷ್ಯ.... ಅಂಧಕಾರ.... ಎಲ್ಲಿಂದಲೊ ಬೆಳಕು ಕಾಣಲೇಬೇಕು"ಎಂಬ ಮೂರ್ತಿಯ ಮಾತು ಮಾತ್ರ ಕೇಳುತ್ತಲೇ ಇತ್ತು .......ಮೂರ್ತಿ........ ಮೂರ್ತಿ...." ಹಾಗೇ ಬಿದ್ದುಕೊಂಡೆ ...

---

## ಅವ್ಮಾ........... ‡ ‡ ‡

ಅಂದು, ಆ ಊರಿನ ಜಾತ್ರೆ. ವರ್ಷವೆಲ್ಲವೂ ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದ ಆ ಹಳ್ಳಿಯವರಿಗೆ ಆ ದಿನ ಮಹಾ ಉತ್ಸವದ ದಿನ. ವರ್ಷ ಪೂರ್ತಿ, ಆ ದಿನಕ್ಕೆಂದೇ ಉತ್ಸಾಹದಿಂದ ಕಾಯುತ್ತಿದ್ದರು. ಆ ನಿರಾಡಂಬರ ಜೀವಿಗಳು ಪ್ರತಿಯೊಬ್ಬ ರೈತನೂ, ಆ ದಿನದ "ಪರಶೆ" ಗೆಂದೇ, ಬಹಳ ಜಾಗ್ರತೆಯಾಗಿ ಎತ್ತಿಡುತ್ತಿದ್ದ ಬೆಳ್ಳನೆಯ ಪಂಚೆಯನ್ನುಟ್ಟು, ಕೆಂಪು ರೇಶ್ಮೆ ವಸ್ತ್ರವನ್ನು ಮೇಲೆ ಹಾಕಿ, ತುಂಬಾ ಎಣ್ಣೆ ಹಚ್ಚಿ ತಲೆ ಬಾಚಿ, ತುಟಿಗಳ ಹೊರಗೂ ಕೆಂಪಗಾಗುವತನಕ ತಾಂಬೂಲವನ್ನಗಿದು, ಕಾಲಿಗೆ ಮೆಟ್ಟನ್ನೂ ಧರಿಸಿ, ಸಡಗರದಿಂದ ತಯಾರಾಗುತ್ತಿದ್ದನು. ಗುಡಿಸಲು ಮುಂದೆಲ್ಲಾ ಚೆನ್ನಾಗಿ ಸಗಣಿ ಹಾಕಿ ಸಾರಿಸಿ, ಚಿತ್ರವಿಚಿತ್ರವಾದ ರಂಗೋಲಿಯಿಂದ ಅಲಂಕರಿಸಿ, ರೈತನ ಗರತಿಯರು ಅಂದು ತಮ್ಮ ಕಲಾನೈಪುಣ್ಯವನ್ನೆಲ್ಲಾ ಹೊರಗೆ ಹಾಕುತ್ತಿದ್ದರು. ಮುಂಜಾನೆಯೇ ಎದ್ದು, ಮನೆಗೆಲಸಗಳನ್ನು ಮುಗಿಸಿಕೊಂಡು ದನಗಳ ಹಬ್ಬದ ಕೆಲಸವನ್ನೂ ಪೂರ್ತಿಮಾಡಿಕೊಂಡು ದನಗಳಿಗೆ ಸಾಕಷ್ಟು ಮೇವು ನೀರನ್ನೆಲ್ಲಾ ಇಟ್ಟು, ಪ್ರತಿ ಹೆಂಗಸೂ, ದಿನದ ಕೆಲಸಕ್ಕಿಂತ ಹೆಚ್ಚಾಗಿ ಇದ್ದುದನ್ನೆಲ್ಲ ಸಂತೋಷದಿಂದಲೇ ಮಾಡುತ್ತ, ರೊಟ್ಟಿಹಿಟ್ಟಿನ ಬುತ್ತಿಯನ್ನೂ ಕಟ್ಟುತ್ತಿದ್ದಳು. ಮಕ್ಕಳಿಗೆ ಅಲಂಕರಿಸುವದರಲ್ಲಿ, ನೆರೆಹೊರೆಯವರನ್ನು "ಆಯಿತೆ? ಹೊರಡೋಣವೆ?" ಎಂಬ ಸ್ನೇಹಮಯವಾದ ಮಾತಿನಲ್ಲಿ, ಅವರ ಅಂದಿನ ಸಡಗರ ಸಂತೋಷಗಳು ಎದ್ದು ಕಾಣುತ್ತಿದ್ದವು. ಕೆಲ ಹೆಂಗಳೆಯರು ವರ್ಷ ಪೂರ್ತಿ ಸೇರಿಸಿದ್ದ ದುಡ್ಡು ದುಗ್ಗಾಣಿಗಳನ್ನು ಎಲೆಯಡಿಕೆ 'ತಿತ್ತಿ'ಯಲ್ಲಿ ಹಾಕಿಕೊಂಡು ಹೊಸ ಬಳೆಗಳನ್ನು ಹಾಕಿಸಿಕೊಳ್ಳುವ ಆಲೋಚನೆಯಲ್ಲಿದ್ದರು. ಚೆನ್ನಾಗಿ ಬಾಚಿ, ಗಟ್ಟಿಯಾಗಿ ತುರುಬು ಕಟ್ಟಿ, ಓಲೆ ಬುಗುಡಿಗಳನ್ನು ಧರಿಸಿ, ಹಸುರು ಜರಿಅಂಚಿನ ಸೀರೆಯುನ್ನುಟ್ಟು, ನೀಲಿಬುಟ್ಟಾ ಹೂವಿನ ರವಿಕೆಯನ್ನು ತೊಟ್ಟು, ತಮ್ಮ ಸೌಂದರ್ಯವನ್ನು ತಾವೇ ಮೆಚ್ಚಿಕೊಳ್ಳುತ್ತ ಹೊರಟರು. ಕೆಲ ಪ್ರೌಢ ಯುವತಿಯರೂ, ದಿನಬೆಳಗಾಗುತ್ತಲೇ ಜಗಳ ಆಡುತ್ತಿದ್ದ ಗಂಡಹೆಂಡಿರೂ ಈ ದಿನ,

ಮುಗುಳುನಗೆ ನಗುತ್ತಾ, ಜಾತ್ರೆಯ ಕಾರ್ಯಕಲಾಪಗಳ ವರ್ಣನೆಯನ್ನು ಚರ್ಚಿಸುತ್ತಾ, ಭುಜಕ್ಕೆ ಭುಜ ತಾಕುವ ಹಾಗೇ ನಡಿಗೆ ಹಾಕುತ್ತಿದ್ದರು. ಕೂತ ಸ್ಥಳದಿಂದ ಏಳಲಾರದೆ, ಎಲೆಯಡಿಕೆ ಕುಟ್ಟಾಣಿಯೇ ತನ್ನ ಪ್ರಪಂಚವೆಂದು ಬಗೆದ ಅಜ್ಜಿಗಳೂ ಸಹ ಹೊರಟಿದ್ದರು. ಒಬ್ಬರೇಕೆ? ಹಳ್ಳಿಯಲ್ಲಿ ಪ್ರತಿಯೊಬ್ಬರೂ ಹೊರಟಿದ್ದರು. ಆ ಮುಗ್ಧತೆ, ಆ ಸರಳತೆ, ಅದರಲ್ಲಿಯ ಸೌಂದರ್ಯ, ಹಳ್ಳಿಗಳಲ್ಲಿ ಹುಟ್ಟಿ ಬೆಳೆದು, ಹಳ್ಳಿಯವರೊಡನಿದ್ದು, ಅವರ ನಿರಾಡಂಬರ ಜೀವನವನ್ನು ಕಂಡವರೇ ವಿನಃ ಯಂತ್ರಯುಗದಲ್ಲಿಯ ನವನಾಗರಿಕ ಪಟ್ಟಣವಾಸದವರು, ಊಹಿಸಿ ಕೂಡ ಅನುಭವಿಸಲಾರರು. ತಲೆಯ ಮೇಲೆ ಬುತ್ತಿಯನ್ನಿಟ್ಟು ಕಂಕುಳಲ್ಲಿ ಮಗುವನ್ನಿರಿಸಿಕೊಂಡು ನಿರಾಡಂಬರದಿಂದ ನಡೆಯುತ್ತಿರುವ ಆ ಹಳ್ಳಿಯ ಪ್ರೌಢೆಯರ ನಡೆಯಲ್ಲಿರುವ ಗಾಂಭೀರ್ಯ ಪಟ್ಟಣವಾಸದ ಸೋದರಿಯರಿಗೆಲ್ಲಿಂದ ಬಂದೀತು? ಅಂತೂ, ಆ ದಿನ, ಜಾತ್ರೆಗೆಂದು ಆ ಹಳ್ಳಿಹಳ್ಳಿಯೇ ಹೊರಟಿತ್ತು

ಬೆಳಿಗ್ಗೆ, ಒಂಬತ್ತು ಒಂಬತ್ತೂವರೆ ಗಂಟೆಗೆ ತೇರಿನ ಬೀದಿ ತುಂಬಿ ಹೋಗಿತ್ತು. ಎಲ್ಲಿ ನೋಡಿದರೂ ಜನರ ಗುಂಪು. ಹೂ ಮಾರುವವರು, ಹಣ್ಣುಹಂಪಲು, ತಿಂಡೀ ಸಾಮಾನು, ಗಾಜಿನ ಸಾಮಾನು, ಚಿತ್ರವಿಚಿತ್ರವಾದ ಪ್ಲಾಸ್ಟಿಕ್ ಸಾಮಾನು, ಒಂದೇಕೆ, ವರ್ಷಪೂರ್ತಿ ಈ ದಿನಕ್ಕಾಗಿ ಕಾದ ಹಳ್ಳಿ ಹುಡಿಗಿಗೆ ಬೇಕಾದ ಸಾಮಾನೆಲ್ಲಾ ಬಂದಿತ್ತು. ರಂಗುರಂಗಿನ ಬೊಂಬೆಗಳು, ವಿಧವಿಧವಾದ ಆಕಾರದಲ್ಲಿಯ 'ಬೆಲೂನ್'ಗಳು, ಚಿನ್ನ ಪಟ್ಟಣದ ಆಟದ ಸಾಮಾನುಗಳು ರೈತರ ಮಕ್ಕಳನ್ನು ಆಹ್ವಾನಿಸುತ್ತಿದ್ದವು. ಎಲ್ಲಿ ಕಂಡರಲ್ಲಿ ಕಾಫಿ ಹೋಟಲುಗಳ ಸಹ ತಯಾರಾಗಿದ್ದವು. ಅಂದು ರೈತರ ಗರತಿಯರು ಗಾಜಿನ ಕಪ್ಪಿನಲ್ಲಿ ಕಾಫಿ ಕುಡಿಯುವ ಪುಣ್ಯವನ್ನು ಕೂಡ ಗಳಿಸಿದ್ದರು. ಸೋಡಾ 'ಲಿಮೊಲೆಟ್' ಕೇಳಿದ ಕಡೆಯಲ್ಲಾ ಸಿದ್ಧವಾಗಿರುತ್ತಿತ್ತು.

ಬಿಸಿಲು ಹೆಚ್ಚುತ್ತಿದ್ದರೂ ಜಾತ್ರೆ ಮಾತ್ರ ಜೋರಾಗಿ ನಡೆಯುತ್ತಿತ್ತು. ಆ ವರ್ಷ ತಾನೆ ಮದುವೆಯಾದ ಹೊನ್ನಹೊನ್ನಿಯರು, ಪ್ರತಿಯಂಗಡಿ ಹತ್ತಿರ ನಿಲ್ಲುತ್ತ ಸಾಮಾನುಗಳನ್ನು ನೋಡುತ್ತ, ಅದರಲ್ಲೇ ಮಗ್ನರಾಗಿದ್ದರು. ಅತ್ತೆ, ಮಾವ, ಭಾವ ಮೈದುನಂದಿರ ನಡುವೆ, ಗಂಡನೊಡನೆ

ಇಷ್ಟಾಗೋಷ್ಠಿ ಮಾಡಲು ಅವಕಾಶವಿಲ್ಲದ ಹೊನ್ನಿಗೆ, ಈ ದಿನ ಹೊನ್ನ ನೊಡನೆ ಜಾತ್ರೆ 'ಸ್ವರ್ಗಸುಖ'ವಾಗಿತ್ತು. ಕೆಂಪುಬಣ್ಣದ ಸಿಲ್ಕಿನಲ್ಲಿ ಮಾಡಿದ್ದ ಗುಲಾಬಿಹೂವೊಂದನ್ನು ಕೊಂಡು, ಹೊನ್ನ ಹೊನ್ನಿಯ ತುರುಬಿನಲ್ಲಿ ಸೇರಿಸಿದನು. ಹೊನ್ನಿ ಅವನೆಡೆ, ನಗೆಯ ನೋಟವನ್ನು ಬೀರುತ್ತಾ ಅವನ ಕೆನ್ನೆಯ ಮೇಲೆ ಮೃದುವಾದ ಏಟೊಂದನ್ನು ಹಾಕಿ ಮತ್ತೊಂದಂಗಡಿಯ ಕಡೆ ನಡೆದಳು. ಹಿಂದೆಯೇ ನೋಡುತ್ತ ಗಂಡನ 'ಸೂಜಿಗಲ್ಲು' ತಾನೆಂಬ ಗರ್ವ ಆ ದಿನ ಅವಳನ್ನು ಚೆಲುವೆಯನ್ನಾಗಿ ಮಾಡಿತ್ತು.

ಪಟ್ಟಣವಾಸದ ಚೆನ್ನೇಗೌಡರ ಸೊಸೆ ಕೂಡ ಬಂದಿದ್ದಳು. ಬಿಸಿಲಿನ ಬೇಗೆಗೆ ಬೇಸತ್ತು, ಆಕೆಗೆ ಜಾತ್ರೆ ಸಾಕುಸಾಕಾಗಿತ್ತು ಆದರೂ, ಆ ಗುಂಪಿನ ಸಡಗರ, ಹಳ್ಳಿಯವರ ಆ ಮುಗ್ಧ ಆನಂದ, ಅವರ ಸಂತೋಷ ಅವಳಿಗೆ ಅದೊಂದು ನಮೂನೆಯ ಆನಂದವನ್ನು ಕೊಡುತ್ತಿತ್ತು. ಎಂದೂ ಹೊರಗೆ ಬಾರದ ಪಟೇಲ್ ಬಸವಣ್ಣನವರ ಸೊಸೆ ಭೈರಮ್ಮ ಸಹ ಅಂದು ಅಲ್ಲಿಗೆ ಬಂದಿದ್ದಳು. ಹಿರಿಯವರಿಗೆ, ಕಿರಿಯವರಿಗೆ, ಶ್ರೀಮಂತ ರಿಗೆ, ಬಡವರಿಗೆ, ಎಲ್ಲರಿಗೂ ಅಂದು ಆ ಜಾತ್ರೆ ಬೇಕಾಗಿತ್ತು ಕೆಲ ಹೆಂಗ ಸರು ಬಳೆಗಾರರನ್ನು ಮುತ್ತಿ, ಹೊಸ ನಮೂನೆಯ ಬಳೆಗಳನ್ನು ಹಾಕಿಸಿ ಕೊಂಡು, ಕೈಯನ್ನು ತಿರುಗಿಸಿ ಮರಗಿಸಿ, ನೋಡಿಕೊಳ್ಳುತ್ತ ಕೈಬಣ್ಣದ ನಾಣ್ಯಕ್ಕೆ ಒಪ್ಪಿದ ಬಳೆಗಳನ್ನೂ, ಬಳೆಗಳೊಪ್ಪಿದ ಕೈ ಅಂದವನ್ನೂ ನೋಡಿಕೊಂಡು ಹಿಗ್ಗುತ್ತಿದ್ದರು. ಮತ್ತೆ ಕೆಲವರು, ಮಕ್ಕಳಿಗೆ ಮಿಠಾಯಿ ಮತ್ತು ಆಟದ ಸಾಮಾನನ್ನು ಕೊಡಿಸುತ್ತಿದ್ದರು. ಪುತ್ತೆ ಕೆಲ ಯುವಕ ಯುವತಿಯರು, ಇದೇ ಸಮಯವೆಂದು ಸರಸ ಸಲ್ಲಾಪಗಳನ್ನಾಡುತ್ತಿ ದ್ದರು. ಜನ ಕಿಕ್ಕಿರಿದಿತ್ತು. ಮಕ್ಕಳ ಅಳು, ಮಾರಾಟದವರ ಕೇಕೆ, ಪೋಲೀಸಿನವರ ಚಾಟೀಶಬ್ದ, ಜನರ ಹರ್ಷದ ಬೊಬ್ಬೆ, ಮುಗಿಲನ್ನು ಮುಟ್ಟುತ್ತಿತ್ತು. ಈ ಮಧ್ಯೆ, ದೇವರ ರಥ (ತೇರು)ಹೊರಟಿತ್ತು. ದವನ, ಬಾಳೆಹಣ್ಣು, ಕಳ್ಳೆಬುರುಗು, ಕಲ್ಯಾಣಸೇವೆ, ದೇವರಿಗೆ ಹಾಕುತ್ತಿದ್ದ ಧೂಪ ಇವುಗಳ ವಾಸನೆ ಗಾಳಿಯಲ್ಲಿ ಇಡುಗಿತ್ತು. ಬ್ರಾಹ್ಮಣರ ಮಂತ್ರ ಘೋಷಣೆ, ಸ್ವರ್ಗದಲ್ಲಿರುವ ದೇವರನ್ನು ಕೆಳಕ್ಕೆ ತರುವಂತೆಯೇ ಇತ್ತು. ಜನ ಜಾತ್ರೆಯಲ್ಲಿ, ಜಾತ್ರೆ ಜನರಲ್ಲಿ ಮರುಳಾಗಿದ್ದವು.

ಈ ಜಾತ್ರೆಗೆ, ಅವಳೂ ಬಂದಿದ್ದಳು. ಆ ಹಳ್ಳಿಯಲ್ಲೇ ಇದ್ದ ಭಟ್ಟರ ಮನೆಯಲ್ಲಿ ಕಸಮುಸುರೆ ಕೆಲಸ ಮಾಡುತ್ತಿದ್ದಳವಳು. ಭಟ್ಟರ ಹೆಂಡತಿ ಎಂದೊ ಕೊಟ್ಟಿದ್ದ 'ಅರಳೀಪೇಟೆ' ಸೀರೆಯನ್ನುಟ್ಟಿದ್ದಳು. ಭಟ್ಟರ ಮನೆಯಲ್ಲಿ ದಿನಬೆಳಗೂ ಕೆಲಸ ನೋಡಿದರೆ, ಅವರು ಅವಳಿಗೆ ಕೊಡುತ್ತಿದ್ದುದು ಎರಡು ಹೊತ್ತಿನ ಅನ್ನ, ಅಷ್ಟೆ.

ಅವಳಿಗೆ ಮೂರು ನಾಲ್ಕು ವರ್ಷದ ಮಗುವೊಂದು ಅವನೇ ಅವಳ ಜೀವನದ ಸರ್ವಸ್ವವಾಗಿದ್ದನು. ತಾನು ಉಪವಾಸವಿದ್ದೂ ಅವನಿಗೆ ಅನ್ನವನ್ನಿಟ್ಟು ಅತಿ ಪ್ರೀತಿಯಿಂದ ಬೆಳಸುತ್ತಿದ್ದಳು ಗಾಳಿ ಬೆಳಕಿನಲ್ಲೇ ಬೆಳೆಯುತ್ತಿದ್ದ ಅವಳ 'ಮಾರನು' ದಷ್ಟಪುಷ್ಟನಾಗಿದ್ದನು. ತನ್ನ ದೇಹದ ಪುಷ್ಟಿಯನ್ನೆಲ್ಲಾ ಅವನಿಗೇ ಕೊಡುತ್ತಿದ್ದ ಅವಳು ಒಣಗಿ ಕಡ್ಡಿಯಂತಿದ್ದಳು. ಆದರೆ ಅವಳ ಮಾತೃಪ್ರೇಮವು ಅವಳ ಹೃದಯದಲ್ಲಿ ತುಂಬಿ ತುಳುಕಾಡುತ್ತಿತ್ತು ಎಂದೊ, ಯಾರೊ ಕೊಟ್ಟ ಹಳೆಯ ಕೋಟೊಂದನ್ನು ಮಗುವಿಗೆ ತೊಡಿಸಿ, ತಲೆ ಬಾಚಿ, ಗೇಣುದ್ದ ಕೆಂಪು ನೂಲಿನಲ್ಲಿ ತಲೆಗೂದಲನ್ನು ಕಟ್ಟಿದ್ದಳು. ಹಣೆತುಂಬ ಒಂದು ಕಾಸಿನಗಲದ ಸಾದಿನ ಬೊಟ್ಟನ್ನಿಟ್ಟು, ಮತ್ತೆ ಮತ್ತೆ ನೋಡಿ, ನೋಡಿ, ಅಪ್ಪಿ ಮುತ್ತಿಟ್ಟಿದ್ದಳು, ಅವಳ 'ಚಿನ್ನ'ನಿಗೆ. ಅಂದು ಅವಳು ತನ್ನ ಮಗುವಿಗಾಗಿಯೇ ಜಾತ್ರೆಗೆ ಬಂದಿದ್ದಳು ತನಗಾಗಿ ಏನೂ ಬೇಕಿರಲಿಲ್ಲ ಅವಳಿಗೆ. ಮಗುವಿಗೆ ಏನಾದರೂ ಕೊಡಸಲಿಕ್ಕೆಂದು, ಭಟ್ಟರ ವೆಂಕಮ್ಮನವರನ್ನು ನಾಲ್ಕಾಣೆ ಹಣಕ್ಕೆ ಅಂಗಲಾಚಿ ಬೇಡಿದ್ದಳು. "ನಮಗೇ ಇಲ್ಲ. ನಿನಗೆಲ್ಲಿ ತರ್ಲೋಣ"ವೆಂದು ಗದ್ದರಿಸಿಕೊಂಡಿದ್ದರು ಆ ಪುರೋಹಿತರ ಹೆಂಡತಿ. ಮತ್ತೆ ಅವಳ ಕಂಕುಳಲ್ಲಿನ ಮಗುವನ್ನು ನೋಡಿ ಮನ ಕರಗಿ, ಒಂದೆರಡು ಪೂರಿ ಉಂಡೆಗಳನ್ನು ನೀಟಿದ ಅವಳೆರಡು ಕೈಲಿ ಹಾಕಿದ್ದರು. ಎಂದಿನಿಂದಲೋ ಸೇರಿಸಿದ್ದ ಬರೇ ಒಂದೆರಡಾಣೆ ಕಾಸುಗಳಲ್ಲಿ ಮಾತ್ರ ಬಂದಿದ್ದಳು ಅವಳು.... ಪಾಪ.... "ಅದೂ ಇದೂ" ತೆಗೆದು ಆ ಹಣವೂ ಖರ್ಚಾಗಿ ಹೋಗಿತ್ತು.

"ಅಮ್ಮಾ, ಅಲ್ಲಿ ನೋಡೆ, ಅದೇನೇ ? ಭಮ್ ಎನ್ನುತ್ತೆ. ಅದನ್ನು ನನಗೆ ಕೊಡಿಸೇ." ಎಂದು ತೊಂದರೆಮಾಡಲುಪಕ್ರಮಿಸಿದ ಅವಳ ಮಾರ, ಬೆಲೂನ್ ಮಾರುವವನು ಬಂದಾಗ.

"ಅಮ್ಮಾ, ಇದು ಬೇಕೇ, ಈ ಗಾಡಿ ಕೊಡಿಸೇ....ವೂ....ಹೂಂ.... ಕೊಡಿಸೇ ಅಮ್ಮಾ...."

" ಬೇಡ ಮಗೂ, ನನ್ನ ಚಿನ್ನ, ಆ ಕಡೆ ಹೋಗೋಣ ನೋಡು· ಅಲ್ಲೀನೊ ತಮಾಷೆಯಿದೆ "ಎಂದು ಬೇರೊಂದೆಡೆಗೆ ಕರೆದುಕೊಂಡು ಹೋದಳು. ಕಣ್ತುಂಬ ನೀರು ಅವಳಿಗೆ....ಜಾತ್ರೆ ಯಾರಿಗೆ ಬೇಕಾಗಿತ್ತು! ಜಾತ್ರೆ ಸಂತೋಷ ಎಲ್ಲ ಹಣವಿದ್ದವರಿಗೆ. ತನ್ನಂತಹ ಭಿಕಾರಿಗೆ ಕಣ್ಣೀರು ....ಮತ್ತೆ ಮಗುವಿಗೆ ಅದು ಹೇಗೆ ತಿಳಿದೀತು.

"ಅಮ್ಮಾ, ಈ ಮಿಠಾಯಿ ಕೊಡಿಸೇ...."

"ಇದು ತಿನ್ನು ಮಗು ಈ ಉಂಡೆ "

"ಊ.... ಹುಂ . . ಇದು ಬೇಡವೆ ...ಅದೇ ಬೇಕು ವೂ ಹೂಂ"

"ಇಲ್ಲಿ ನೋಡು ನನ್ನ ಚಿನ್ನ, ಹಾಗೆ ಅಳಬಾರದಮ್ಮಾ."

* * * *

ಜನದ ನೂಕುನುಗ್ಗಲು ಹೆಚ್ಚಾಯಿತು. ಜಾತ್ರೆ ಬಹಳ ಉತ್ಸಾಹ ದಿಂದ ನಡೆಯುತ್ತಿತ್ತು. ವೈಶಾಖದ ಬಿಸಿಲು ತೀವ್ರವಾಗಿತ್ತು. ಅವಳಿಗೆ ದೇಹ ಮನಸ್ಸು, ದಣಿದಿತ್ತು. ಹಾಗೆಂದು ಸ್ವಲ್ಪ ತನ್ನ ಮಗುವನ್ನು ಇಳಿಸಿ ಬದಿಯಲ್ಲೀ ಕುಳ್ಳಿರಿಸಿ, ತಾನೂ ಒಂದೆಡೆ ಕೂತು, ಎಲೆಯಡಿಕೆ "ತಿತ್ತಿ" ಯನ್ನು ತೆಗೆದು. ಒಣಗಿದ ಎಲೆಗೆ ಸುಣ್ಣದ ಮುದ್ದೆಯನ್ನಿಟ್ಟು, ಅಡಿಕೆ ಚೂರೊಂದನ್ನು ಬಾಯಲ್ಲಿ ಹಾಕಿಕೊಂಡಳು. "ಮಾರ, ಇರು ಪುಟ್ಟಾ. ಎಲೆಹಾಕಿಕೊಂಡು ಎತ್ತಿಕೋತೀನಿ" ಎಂದು ಬದಿಗೆ ತಿರುಗಿದಳು. ಮಾರ ಕಾಣಲಿಲ್ಲ....

ಚಿಕ್ಕ ಮಾರನು ಆಟದ ಸಾಮಾನಿನ ಗಾಡಿಯನ್ನು ನೋಡಲು ಎದ್ದ.... ಹಾಗೇ ತಾಯಿಯಿಂದ ಮತ್ತೆಲ್ಲೋ ಆ ಗುಂಪಿನಲ್ಲಿ ಜಾರಿದ ... ಎತ್ತ ನೋಡಿದರೂ ಜನ.... ಹೊಸ ಮುಖಗಳು .. ತಾಯಿ ಕಾಣಲಿಲ್ಲ.

"ಅಮ್ಮಾ ! ... ಅಮ್ಮಾ !...."

ಅಳುತ್ತಿದ್ದ ಮಗುವನ್ನು ಅಲ್ಲೀ ನಿಂತಿದ್ದ ಯಾರೋ ಒಬ್ಬರು ಎತ್ತಿ ಕೊಂಡು ಕೇಳಿದರು. "ಯಾರಪ್ಪಾ.... ಮಗು ? ... ನಿಮ್ಮಮ್ಮನೆಲ್ಲಿ?"

"ಅಮ್ಮಾ!.... ಅಮ್ಮಾ!...." ಎಂಬೊಂದೇ ಉತ್ತರ.

' ನಿನ್ನ ಹೆಸರೇನು ಮಗೂ ?"

“ಅಮ್ಮಾ.... ಅಮ್ಮಾ” ಒಂದೇ ಅಳು.

“ಇಲ್ಲಿ ನೋಡು ಮಗೂ, ಈ ಬೆಲೂನ್ ಎಷ್ಟು ಚೆನ್ನಾಗಿದೆ.... ಎಷ್ಟು ರಂಗಿನವು ? ನೋಡು, ಹೇಗೆ ಊದುತ್ತೆ ...”

“ಹೂಂ. ಬೇಡ. ..ನಂಗೆ ಅಮ್ಮಾ ಬೇಕೂ....ಉ. ಉ....”

“ಹೋಗಲಿ, ಈ ಗಾಡಿ ನೋಡು ಮಗೂ .. ದಾರ ಕಟ್ಟಿ ಎಳೆದರೆ ಹೇಗೆ ಬರುತ್ತೆ.... ಅಳಬೇಡ ಮಗೂ.... ಮಗೂ....ತೆಗೊ . .”

“ಉ.... ಹ್ಲುಂ ... ಅಮ್ಮಾ .. ”

“ಸರಿ ... ಈ ಮಿಠಾಯಿ ತಿನ್ನೂ”

“ಅಮ್ಮಾ.... ಅಮ್ಮಾ....”

“ಅಮ್ಮಾ .......”

ಸಾಯಂಕಾಲವಾಗುತ್ತ ಬಂತು. ಜನರ ಸಮೂಹ ಕರಗುತ್ತಲಿತ್ತು. ಮಾರನ “ಅಮ್ಮಾ” ಕೂಗೊಂದೇ ಕೇಳುತ್ತಿತ್ತು.

ಇದನ್ನೆಲ್ಲಾ ನೋಡುತ್ತಿದ್ದ ವಿರಾಗಿಯೊಬ್ಬನ ಕಣ್ಣಲ್ಲಿ ನೀರ್ಮೂಂಬಿತು. ದಿಕ್ಕುಗಾಣದೆ, ಕಂಗೆಟ್ಟು, ಪುಟ್ಟ ಹೆಜ್ಜೆಯನ್ನು ಇಡುತ್ತಿದ್ದ ಮಾರನನ್ನೆತ್ತಿಕೊಂಡು “ಬಾ ಮಗು....ಅಮ್ಮನ ಹತ್ತಿರ ಹೋಗೋಣ” ಎಂದು ‘ಅಮ್ಮ’ನಿಗಾಗಿ, ಓಣಿಯೋಣಿ, ಬೀದಿ ಬೀದಿ ತಿರುಗುತ್ತಲಿದ್ದ.

“ಅಮ್ಮಾ....!” ಒಂದೇಸಮನೆ ಮಾರನು ಅಳುತ್ತಿದ್ದನು ಬೈರಾಗಿ ಎಲ್ಲೆಲ್ಲ ಸುತ್ತಿ, ಮತ್ತೆ ತೇರಿನ ಬೀದಿಗೇ ಬಂದನು.

ಬೆಳಗಿನಿಂದಲೂ ಜಾತ್ರೆಯ ಸಡಗರದಲ್ಲಿದ್ದ ತೇರಿನ ಬೀದಿ ಈಗ ನಿಶ್ಶಬ್ದವಾಗಿತ್ತು. ಆ ನಿಶ್ಶಬ್ದತೆಯಲ್ಲಿ ಮಾರನ “ಅಮ್ಮಾ” ಪ್ರತಿಧ್ವನಿ ಕೊಡುತ್ತಿತ್ತು.

ಗುಡಿಯ ಬಾಗಿಲಿಗೆ ಬಂದು ಬೈರಾಗಿ, “ದೇವರೇ, ನೀನೇ ಹುಡುಕಿ ಕೊಡು ಅಮ್ಮನನ್ನು” ಎನ್ನುವ ಹಾಗೆ ನಿಂತ.

ಚಿಕ್ಕ ಮಾರ ತಟಕ್ಕನೆ ವಿರಾಗಿಯ ಕೈಗಳಿಂದ ಧುಮುಕಿದ.... “ಅಮ್ಮಾ!....ಲೇ ಅಮ್ಮಾ!” ಎಂದು.

ಮಾರನಿಗಾಗಿ, ಹುಡುಕಿ, ಹುಡುಕಿ, ಅತ್ತು ಅತ್ತು ಕಂಗೆಟ್ಟು, ಅಲ್ಲಿಗೇ ಬರುತ್ತಿದ್ದಳು ಅವಳೂ ಸಹ.

“ಅಮ್ಮಾ....” ಮಾರನ ಧ್ವನಿ ತೃಪ್ತಿಯಿಂದ ಕೂಡಿತ್ತು. ಹಸಿದ

ಹೊಟ್ಟೆ ತುಂಬಿದ ತೃಪ್ತಿ!

"ನನ್ನ ಚಿನ್ನಾ! ..." ಅವಳು ಧಾವಿಸಿ ಅವನನ್ನು ಎತ್ತಿಕೊಂಡು ಗಟ್ಟಿಯಾಗಿ ಅಪ್ಪಿ ಮುತ್ತಿಟ್ಟಳು. ಕಣ್ಣುಗಳಿಂದ ನೀರು ತಾನೇ ತಾನಾಗಿ ಸುರಿದು ಹೋಗುತ್ತಿತ್ತು.

"ನನ್ನ ಚಿನ್ನ, ಎಲ್ಲಿ ಹೋಗಿಬಿಟ್ಟೆ ಮಗೂ, ನನ್ನ ಬಂಗಾರ........ ನನ್ನ ಜೀವ ....!"

ದಿನವೆಲ್ಲ, ಅಮ್ಮನಿಗಾಗಿ ಹುಡುಕಿ ಹುಡುಕಿ ದಣಿದಿದ್ದ ಮಾರ, ಅಮ್ಮನ ಮಡಿಲು ಸೇರುತ್ತಲೇನೇ ನಿದ್ದೆ ಮಾಡಲು ಶುರು ಮಾಡಿದ. ಅಮ್ಮನನ್ನು ಕಂಡ ತೃಪ್ತಿಯಲ್ಲಿ ಆ ಮಗುವಿಗಾಗಲೇ ನಿದ್ದೆ ಬಂದಿತ್ತು. ಅವನನ್ನು ಮಡಿಲಲ್ಲಿ ಮಲಗಿಸಿಕೊಂಡು, ಅವಳು ಅತಿ ದೈನ್ಯದಿಂದ ಬೈರಾಗಿಯ ಕಡೆ ತಿರುಗಿ "ಸ್ವಾಮಿ, ನಿಮಗೆ ಸಾವಿರ ನಮಸ್ಕಾರಗಳು. ಮಗುವೆಲ್ಲೋ ಹೋಯಿತೆಂದು ಊರೆಲ್ಲ ಹುಡುಕಿದೆ ಸ್ವಾಮಿ....ಅವನು ನನ್ನ ಪ್ರಾಣ.... ನನ್ನ ಮಗುವನ್ನು ನನಗೆ ಕೊಟ್ಟಿರಿ...." ಎಂದು ಮತ್ತೆ ಮತ್ತೆ ನಿದ್ದೆ ಹೋಗುತ್ತಿದ್ದ ಮಗುವನ್ನು ಅಪ್ಪಿ ಮುತ್ತಿಟ್ಟಳು.

ಮಾರ ನಿದ್ದೆಯಲ್ಲಿಯೆ ನಗುತ್ತಾ ಕನವರಿಸುತ್ತಿದ್ದ "ಅಮ್ಮಾ... !" ಎಂದು.